ಮುದ್ರಣ:
ಹಕ್ಕುಗಳು ಕಾದಿರಿಸಲಾಗಿದೆ

ಪರಿಷ್ಕರಣೆ – ಪ್ರಕಾಶನದ ನಿರ್ವಹಣೆ
ಟಿ.ಎಸ್. ಸುರೇಶ್, ಬಿ.ಎಸ್.ಸಿ., (ಆನರ್ಸ್)
ಬನಶಂಕರಿ– ಬೆಂಗಳೂರು–70.

ಅಧಿಕೃತ ಮಾರಾಟಗಾರರು:
ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು
234, ಚಿಕ್ಕಪೇಟೆ, ಬೆಂಗಳೂರು–560 053.
ದೂರವಾಣಿ : 22258217

ಡಿ.ಟಿ.ಪಿ. :




ಬೆಂಗಳೂರು – 560 078.

ಮುದ್ರಣ :
ಶ್ರೀ ವೆಂಕಟೇಶ್ವರ ಪ್ರಿಂಟಿಂಗ್ ಪ್ರೆಸ್
ಬೆಂಗಳೂರು–560 078. ದೂರವಾಣಿ : 22444763



# ಹದಿನಾರು ಸೋಮವಾರ ವ್ರತ

## ವ್ರತದ ಬಗ್ಗೆ :-

ಈ ವ್ರತವು ಇಷ್ಟಾರ್ಥಪ್ರದವಾದುದು. ಇದು ಪಾರ್ವತೀ ಪರಮೇಶ್ವರರಿಗೆ ಅತ್ಯಂತ ಇಷ್ಟವಾದದ್ದು. ಈ ವ್ರತವನ್ನು ಎಲ್ಲ ಜನಾಂಗದವರೂ ಆಚರಿಸಬಹುದು. ಈ ವ್ರತವನ್ನು ಸೂತಪುರಾಣಿಕರು–ನೈಮಿಷಾರಣ್ಯ ಪುಣ್ಯಸ್ಥಳದಲ್ಲಿ ಲೋಕಹಿತಕ್ಕಾಗಿ ಶೌನಕಾದಿ ಮಹರ್ಷಿಗಳಿಗೆ ತಿಳಿಸಿದರೆಂದು ಉಲ್ಲೇಖಿತವಾಗಿದೆ.

ಆಷಾಢ ಶುಕ್ಲಪಕ್ಷದಿಂದ – ಕಾರ್ತೀಕ ಶುಕ್ಲಪಕ್ಷದ ವರೆಗಿನ ಹದಿನಾರು ಸೋಮವಾರಗಳು (ನಾಲ್ಕು ತಿಂಗಳು) ಈ ವ್ರತವನ್ನು ಆಚರಿಸಬೇಕು.

## ಸಲಹೆ - ಸೂಚನೆಗಳು :-

ವ್ರತವನ್ನು ಆಚರಿಸುವವರು (ಸ್ತ್ರೀ–ಪುರುಷರು– ಯಾರೇ ಆಗಲಿ) ಕೆಲವು ನಿಯಮಗಳನ್ನು ಶ್ರದ್ಧೆಯಿಂದ ಪಾಲಿಸಬೇಕು.

1. ವ್ರತವನ್ನು ಆಚರಿಸುವ ಸೋಮವಾರದಂದು ಅಭ್ಯಂಜನ ಸ್ನಾನಮಾಡಿ ಸಾಯಂಕಾಲ – ಅಂದರೆ ವ್ರತಪೂಜೆ ಮುಗಿಯುವವರೆಗೆ ಉಪವಾಸ ಇರಬೇಕು. ಸಾಧ್ಯ ಆಗದಿದ್ದಲ್ಲಿ– ಲಘು ಹಣ್ಣು ಅಥವಾ ಹಾಲನ್ನು ಸ್ವೀಕರಿಸಬಹುದು.

2. ವ್ರತದ ಆಚರಣೆಯ ದಿನ ಬೆಳಿಗ್ಗೆ ಸ್ನಾನಮಾಡಿ ಉಪವಾಸ ಇದ್ದು ಸಂಜೆ ಸೂರ್ಯ ಮುಳುಗುವ ಸಮಯದಲ್ಲಿ ಮತ್ತೆ ಸ್ನಾನ ಮಾಡಿ ಶುಚಿ ಆಗಬೇಕು. ಹುತ್ತದ ಮಣ್ಣಿನಿಂದ ಪರಮೇಶ್ವರನ ಲಿಂಗವನ್ನು ತಯಾರಿಸಬೇಕು. ಮುಂದೆ ತಿಳಿಸುವ ವಿಧಾನದಿಂದ ಪೂಜಾ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡು ಷೋಡಶ ಉಪಚಾರಗಳಿಂದ ವ್ರತವನ್ನು ಸಾಂಗವಾಗಿ ಆಚರಿಸಿ ಕೊನೆಯಲ್ಲಿ ಬ್ರಹ್ಮಾರ್ಪಣೆಯೊಂದಿಗೆ ಶಿವಲಿಂಗವನ್ನು ನೀರಿನಲ್ಲಿ ವಿಸರ್ಜಿಸಬೇಕು.

3. ವ್ರತಪೂರ್ಣ ಆಚರಿಸಿ ಅಂದರೆ ವಿಸರ್ಜನೆ ನಂತರ ಬ್ರಾಹ್ಮಣನಿಗೆ ಬಾಗಿನವನ್ನು ದಕ್ಷಿಣೆಯೊಂದಿಗೆ ಕೊಟ್ಟು ಆತನಿಂದ ಆಶೀರ್ವಾದ ಪಡೆಯಬೇಕು. ನಂತರ ಕಥಾಶ್ರವಣ ಮಾಡಬೇಕು.

4. ನೈವೇದ್ಯಕ್ಕಾಗಿ ಹುರಿದ ಗೋದಿ, ತುಪ್ಪ, ಬೆಲ್ಲ, ಏಲಕ್ಕಿ ಇವುಗಳಿಂದ ಗುಲಪಾವಟೆ ಉಂಡೆಗಳನ್ನು ಮಡಿಯಲ್ಲಿ ಮಾಡಿಟ್ಟುಕೊಳ್ಳಬೇಕು. ಈ ಖಾದ್ಯವನ್ನು ಮೂರು ಭಾಗಮಾಡಿ ನೈವೇದ್ಯ ಮಾಡಬೇಕು. ಕಥಾ ಶ್ರವಣದ ನಂತರ – ಗೋವಿಗೆ ನೀಡಬೇಕು. ಒಂದು ಭಾಗ ಪ್ರಸಾದವನ್ನು ಮನೆಯವರೆಲ್ಲ ಭುಜಿಸಬೇಕು. ವ್ರತ ಮಾಡುವವರು ಆ ದಿನ ಪ್ರಸಾದದ ಹೊರತು ಬೇರೆ ಏನನ್ನೂ ಸೇವಿಬಾರದು. ಶಿವಲಿಂಗವನ್ನು ನದಿ, ಕೆರೆ ಅಥವಾ ಬಾವಿಯಲ್ಲಿ ವಿಸರ್ಜಿಸಬೇಕು.

5. 16 ಸೋಮವಾರಗಳು ಶ್ರದ್ಧಾ ಭಕ್ತಿಗಳಿಂದ ವ್ರತವನ್ನು ಶಾಸ್ತ್ರೋಕ್ತವಾಗಿ ಯಾವ ನ್ಯೂನತೆ ಮಾಡದೆ ಆಚರಿಸಿದ ನಂತರ ಹದಿನೇಳನೆಯ ಸೋಮವಾರ ಮತ್ತೆ ಈ ವ್ರತವನ್ನು ಎಂದಿನಂತೆ ಆಚರಿಸಿದರ ವ್ರತ ಸಂಪೂರ್ಣ ಆಗುತ್ತದೆ. 17ನೆಯ ಸೋಮವಾರ ಸಹ ನೈವೇದ್ಯಕ್ಕಾಗಿ ಮಾಡಿರುವ ಖಾದ್ಯವನ್ನೇ



ಗೋವಿಗೆ ನೀಡಿ, ತಾನೂ ಸ್ವೀಕರಿಸಿ, ಮನೆಯಲ್ಲಿ ಎಲ್ಲರಿಗೂ ಹಂಚಬೇಕು. ಆ ದಿನ ವ್ರತ ಆಚರಿಸಿರುವವರು ನೈವೇದ್ಯ ಭುಜಿಸಿದನಂತರ ಊಟವನ್ನು ಮಾಡಬಹುದು.

6. ವ್ರತದ ಆಚರಣೆ ನಂತರ ಕರ್ತವ್ಯವು, ಶಿವಪಂಚಾಕ್ಷರೀ ಮಂತ್ರವನ್ನು 108 ಸಲ ಜಪಿಸಬೇಕು. ಸಾಧ್ಯ ಇದ್ದಲ್ಲಿ 500 ಸಲ, ಅಥವಾ 5000 ಸಲ ಜಪಿಸಿದರೆ ಪುಣ್ಯಪ್ರದವು.

7. ವ್ರತವನ್ನು ಆಚರಿಸುವವರು ಆ ದಿನ ಮಿತ ಆಹಾರ ಸೇವಿಸಬೇಕು. ಮಾಂಸಭಕ್ಷಣೆ, ಮದ್ಯಪಾನ, ದಾಂಪತ್ಯಸುಖ ಇಚ್ಛಿಸಬಾರದು. ಕೆಟ್ಟ ಮಾತುಗಳನ್ನು ಆಡಲೇ ಬಾರದು.

ವ್ರತ ಆಚರಣೆಯಿಂದ – ಮನಸ್ಸಿನ ಕ್ಲೇಶ, ಆರ್ಥಿಕ ತೊಂದರೆ, ನಿವಾರಣೆ ಆಗಿ, ಅನಾರೋಗ್ಯಗಳು ಗುಣವಾಗಿ ಒಟ್ಟಿನಲ್ಲಿ ನೆಮ್ಮದಿ, ಐಶ್ವರ್ಯ ಆರೋಗ್ಯ ಇವುಗಳು ಪಾರ್ವತೀ ಪರಮೇಶ್ವರರ ಕೃಪೆಯಿಂದ ಲಭಿಸುತ್ತವೆ.

ವಿದ್ಯಾರ್ಥಿಗಳು ಸಹ ಈ ವ್ರತವನ್ನು ಶ್ರದ್ಧಾಭಕ್ತಿಗಳಿಂದ ಆಚರಿಸಿದಲ್ಲಿ, ಅವರುಗಳ ವಿದ್ಯಾಭ್ಯಾಸ ಯಾವ ಅಡಚಣೆ ಬಾರದೆ ನಿರ್ವಿಘ್ನವಾಗಿ ಮುಂದುವರೆದು ಒಳ್ಳೆಯ ಪದವಿ ಪಡೆಯುತ್ತಾರೆ.

ಶಿವ ಪಂಚಾಕ್ಷರೀ ಮಂತ್ರ

**ಓಂ ನಮಶ್ಶಿವಾಯ**





# ವ್ರತ ಪೂಜಾ ವಿಧಾನ

**ಆಚಮನ**

ಓಂ ಕೇಶವಾಯ ನಮಃ। ಓಂ ನಾರಾಯಣಾಯ ನಮಃ। ಓಂ ಮಾಧವಾಯ ನಮಃ। ಓಂ ಗೋವಿಂದಾಯ ನಮಃ। ಓಂ ವಿಷ್ಣವೇ ನಮಃ। ಓಂ ಮಧುಸೂದನಾಯ ನಮಃ। ಓಂ ತ್ರಿವಿಕ್ರಮಾಯ ನಮಃ। ಓಂ ವಾಮನಾಯ ನಮಃ । ಓಂ ಶ್ರೀಧರಾಯ ನಮಃ । ಓಂ ಹೃಷೀಕೇಶಾಯ ನಮಃ। ಓಂ ಪದ್ಮನಾಭಾಯ ನಮಃ। ಓಂ ದಾಮೋದರಾಯ ನಮಃ। ಓಂ ಸಂಕರ್ಷಣಾಯ ನಮಃ। ಓಂ ವಾಸುದೇವಾಯ ನಮಃ। ಓಂ ಪ್ರದ್ಯುಮ್ನಾಯ ನಮಃ। ಓಂ ಅನಿರುದ್ಧಾಯ ನಮಃ। ಓಂ ಪುರುಷೋತ್ತಮಾಯ ನಮಃ। ಓಂ ಅಧೋಕ್ಷಜಾಯ ನಮಃ। ಓಂ ನಾರಸಿಂಹಾಯ ನಮಃ। ಓಂ ಅಚ್ಯುತಾಯ ನಮಃ। ಓಂ ಜನಾರ್ದನಾಯ ನಮಃ। ಓಂ ಉಪೇಂದ್ರಾಯ ನಮಃ। ಓಂ ಹರಿಯೇ ನಮಃ। ಓಂ ಶ್ರೀ ಕೃಷ್ಣಾಯ ನಮಃ।

ಓಂ ಶ್ರೀ ಮಹಾಗಣಾಧಿಪತಯೇ ನಮಃ। ಮಮ (ಎಂದು ಉಚ್ಚರಿಸುತ್ತಾ) ಇಷ್ಟದೇವತಾಭ್ಯೋ ನಮಃ। ಕುಲದೇವತಾಭ್ಯೋ ನಮಃ। ಸರ್ವದೇವತಾಭ್ಯೋ ನಮಃ। ಸರ್ವಬ್ರಾಹ್ಮಣೇಭ್ಯೋ ನಮಃ। ಏತತ್ ಕರ್ಮ ಪ್ರಧಾನ ದೇವತಾಭ್ಯೋ ನಮಃ॥ ಅವಿಘ್ನಮಸ್ತು॥ (ಎಂದು ಹೇಳಿದ ನಂತರ) ಸರ್ವವಿಘ್ನವಿನಾಶಕನಾದ ಶ್ರೀ ವಿಘ್ನೇಶ್ವರನನ್ನು ಧ್ಯಾನಿಸಬೇಕು.



**ವಿಘ್ನೇಶ್ವರ ಧ್ಯಾನ :-**

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪ ಶಾಂತಯೇ॥
(ನಂತರ ಪ್ರಾಯಶ್ಚಿತ್ತ ಸಂಕಲ್ಪಕ್ಕಾಗಿ – ಅಕ್ಷತೆ – ಬಿಡಿಹೂಗಳನ್ನು ಕೈಯಲ್ಲಿಟ್ಟುಕೊಂಡು)

**ಪ್ರಾಯಶ್ಚಿತ್ತ ಸಂಕಲ್ಪ ಮಂತ್ರ :-**

ಅಶೇಷೇ ಹೇ ಪರಿಷತು ಮದೀಯಾಂ ವಿಜ್ಞಾಪನಾಂ ಸಮ್ಯಗ್ ಅವಧಾರ್ಯ ಮಯಾಸಮರ್ಪಿತಾಂ॥ ಇಮಾಂ ಸೌವರ್ಣಿಂ ಪರಿಷತ್ ದಕ್ಷಿಣಾಂ ಯತ್ ಕಿಂಚಿತ್ ದಕ್ಷಿಣಾಮಪಿ ಯಥೋಕ್ತ ದಕ್ಷಿಣಾಮಿ ಸ್ವೀಕೃತ್ಯ ಮಮ (ಕರ್ತೃವು ತನ್ನ ಗೋತ್ರ, ಜನ್ಮ ನಕ್ಷತ್ರ, ರಾಶಿ, ಹೆಸರು ಹೇಳಿಕೊಂಡು) ಗೋತ್ರಾಯಾಃ ............ ಜನ್ಮನಕ್ಷತ್ರೇ ............ ಜನ್ಮರಾಶೌ............ ನಾಮಧೇಯ ಮಮ ಧರ್ಮಪತ್ನ್ಯಾ ಸಹ ಇಹಜನ್ಮ ಜನ್ಮನೀ ಜನ್ಮಾಂತರರೇವಾ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಕೃತಯಾ ಸರ್ಪ, ಶುಕ, ಶಾರಿಕಾ, ಮಾರ್ಜಾಲಾದಿ ಹಿಂಸಯಾವಾ, ಗರ್ಭಪಾತ ನಿಮಿತ್ತೌಷಧ ದಾನೇವಾ ಅನ್ಯಗೃಹದಾನೇವಾ, ವಲ್ಮೀಕ ಭೇದನ, ವೃಕ್ಷ ಭೇದನ, ಸರ್ಪವಾಸ ಸ್ಥಳ ಉಚ್ಚಾಟನಾ ಮಮ ಗೃಹೇ ಸರ್ಪವಧ, ದಾಹೇನವಾ, ವಿಷಶಲ್ಯ ಚೂರ್ಣಿಕಾದಿ ಪ್ರಯೋಗೇನವಾ ಸಂಭಾವಿತ ಸಮಸ್ತ ವ್ಯಕ್ತಗರ್ಭಪ್ರತಿಬಂಧಕ ದೋಷ ನಿವಾರಣಾರ್ಥಂ ಕಾಕವಧ್ಯಾ, ಕದಳೀವಂಧ್ಯ, ಸ್ತ್ರೀರಜಸ್ವಲಾದೋಷ, ಅನಪತ್ಯದೋಷ, ಗರ್ಭಸ್ರಾವ, ಮೃತಾಪತ್ಯ, ಸ್ಯನ್ನಂಚ ಕ್ರಿಮಿಕೂಪಪಚ್ಚರ, ಅಧಿಕ ರಕ್ತಸ್ರಾವ, ಭೂತಗ್ರಹ, ಪ್ರೇತಗ್ರಹ, ಪಿಶಾಚಗ್ರಹ, ಬ್ರಹ್ಮರಾಕ್ಷಸ ಗ್ರಹ, ಕೃತ್ರಿಮ ಗ್ರಹಾದಿ ಸುವಾಸಿನ್ಯಾಕೃತಿ ವಾಯುರೂಪ ಪೀಡಾದಿ ಸಮಸ್ತದೋಷ ನಿವಾರಣಾರ್ಥಂ, ರತಿಭಿನ್ನ, ಶೀಘ್ರ ವೀರ್ಯಸ್ಖಲನ, ಶುಕ್ಲತೋಯತ್ವ ಪರಿವೇಶನಂ, ಪುಣ್ಯಾ ಪಾಪಂ

ಪೂರ್ವಭವೇಯತ್ಕೃತಂ ಜ್ಞಾನತೋ ಅಜ್ಞಾನತೋ, ವಾಪಿ ಏವತತ್ ಸಮುಪಸ್ಥಿತಂ ತದ್ವದೇವ ದೋಷಂ ನಿವಾರಣಾರ್ಥಂ, ಪಿತೃಶಾಪ, ದೇವಶಾಪ, ಶತ್ರುಶಾಪ, ವಿಷ್ಣುಶಾಪ, ಸ್ತ್ರೀ ಶಾಪ, ಮಾತೃಶಾಪ, ಸರ್ವಶಾಪ, ಬ್ರಹ್ಮಶಾಪ, ಬ್ರಾಹ್ಮಣಶಾಪ, ಭ್ರಾತೃಶಾಪ, ಮಾತುಲಶಾಪ, ಪತ್ನೀ (ಪತಿ) ಶಾಪ, ಪ್ರೇತ ನಿವಾರಣಾರ್ಥಂ ಅಜಾತ ಗರ್ಭವಂಧ್ಯ, ಸ್ತ್ರೀಪುರುಷ ವಂಧ್ಯ, ಪುರ್ವಾಪರ ನಾಶವಂಧ್ಯ, ದೇವತಾಗ್ರಹಾದಿ, ದೇವತಾಗ್ರಸ್ತವಂಧ್ಯ, ಸ್ತ್ರೀ ಪ್ರಜಾವಂಧ್ಯ, ಪುರುಷ ಪ್ರಜಾವಂಧ್ಯ, ರಜೋಹಿತವಂಧ್ಯ, ಭರ್ತೃವಿದ್ವೇಷಿಣೇ ವಂಧ್ಯ, ಸಂತಾನ ಪ್ರತಿ ಬಂಧಕ ನಿವೃತ್ತಿದ್ವಾರಾ ಉತ್ತರೋತ್ತರ ಪ್ರಸೂತಾ ಜೀವಸುಪುತ್ರಾ ವಾಪ್ರಾಪ್ತ್ಯರ್ಥಂ ಉತ್ತರತ್ರದ್ಯಢ ಗರ್ಭತಾ ಗರ್ಭಸ್ಥಶಿಶು ಸಂರಕ್ಷಣಾರ್ಥಂ, ಸುಪುತ್ರ ಜನನಾರ್ಥಂ, ಮಮ ವಂಶಾಭಿವೃದ್ಧ್ಯರ್ಥಂ, ಮೂಕ, ಸ್ತಬ್ಧ, ಬಧಿರ, ಮೂಡ, ಅಪಸ್ಮಾರ, ಬುದ್ಧಿಹೀನ, ಅಂಗಹೀನ, ಸದಾರೋಗಿಣಾಂ, ವಿಚಿತ್ರಾಂಗ ಜನನ, ವಿಕಾರರೂಪ, ಹಸ್ತ ಪಾದ ಕುಂಠನ, ಜನನಾದಿ ನೇತ್ರಹೀನ, ಪುಷ್ಪನೇತ್ರ, ತಾರುಣ್ಯ, ಬಾಲ್ಯ ಅವಸ್ಥಾನಾಂ, ಹೀನಾಂಗದೋಷ, ಅಕಾಲಮರಣ, ಅಲ್ಪಾಯುಃ, ಬಾಲಗ್ರಹಾದಿ ಪೀಡಾನಾಂ, ಅಷ್ಟದರಿದ್ರತಾ, ಜನ್ಮರೋಗೀಣಾಂ, ಜನ್ಮದರಿದ್ರ- ತಾನುಭವನಾಂ ಸಕಲದೋಷ ನಿವಾರಣಾರ್ಥಂ ಸರ್ಪದೋಷ ನಿವಾರಣಾರ್ಥಂ, ಸುಪುತ್ರತಾ ಪ್ರಾಪ್ತ್ಯರ್ಥಂ ಕ್ಷಯದ್ವಾರಾ ಸಮಸ್ತಪಾಪಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಸರ್ವೇಶಾಂ ಪಾಪಾನಾಂ ಪರಿಹಾರ ಪೂರ್ವಕ ದೇವ ಬ್ರಾಹ್ಮಣ ಪ್ರೀತ್ಯರ್ಥಂ, ಆತ್ಮಶುದ್ಧ್ಯರ್ಥಂ ಷೋಡಶ ಸೋಮವಾರ ಪೂಜಾ ಕರ್ಮಾಧಿಕಾರ ಸಿದ್ಧ್ಯರ್ಥಂ, ಅಷ್ಟದರಿದ್ರತಾ ನಿವಾರಣಾರ್ಥಂ ಯಥಾಶಕ್ತಿ ಪ್ರಾಯಶ್ಚಿತ್ತಂ ನಿಶ್ಚಿತ್ಯ ಯಥಾಶಕ್ತಿ ಹಿರಣ್ಯದಾನಂ ಕರ್ತುಂ ಪ್ರಾಜಾಪತ್ಯ ಪ್ರತ್ಯಾಮ್ನಾಯ ಯಥಾಶಕ್ತಿ ಸರ್ವಪ್ರಾಯಶ್ಚಿತ್ತಾರ್ಥಂ ಬ್ರಹ್ಮಣಾನಾಂ ಸ್ವೀಕುರುಷ್ವ ||



ಮಮ ಷೋಡಶ ಸೋಮವಾರ ಪೂಜಾ ಕರ್ಮಾಧಿಕಾರ ಸಿದ್ಧ್ಯರ್ಥಂ ಮಾಣ ಅನುಗೃಹ್ಣಂತು ಭವಂತಃ ||

**(ಎಂದು ಹೇಳಿಕೊಳ್ಳುತ್ತಾ, ಕಾಣಿಕೆ ಸಹಿತ ತಾಂಬೂಲವನ್ನು ಪ್ರತಿಷ್ಠಿಸಿರುವ ಬಲಭಾಗದಲ್ಲಿಡಬೇಕು. ಪೂಜೆಯ ನಂತರ ಅದನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.)**

### ವ್ರತಪೂಜಾ ಸಂಕಲ್ಪ

**(ಕೈಯಲ್ಲಿ ಅಕ್ಷತೆ, ಬಿಡಿ ಹೂ, ಬಿಲ್ವಪತ್ರೆಯನ್ನು ಹಿಡಿದುಕೊಂಡು)**

ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋರಾಜ್ಞಯಾ ಪ್ರವರ್ದಮಾನಸ್ಯಆದ್ಯಬ್ರಹ್ಮಣಃ ದ್ವಿತೀಯ ಪ್ರಹರಾರ್ಧೆ, ವಿಷ್ಣುಪದೇ ಶ್ರೀ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ, ಕಲಿಯುಗೇ, ಪ್ರಥಮಪಾದೇ ಅಷ್ಟಾವಿಂಶತಿ ತಮೇ ಯುಗೇ, ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ದಂಡಕಾರಣ್ಯೇ ದೇಶೇ, ಗೋದಾವರ್ಯಾಃ, ದಕ್ಷಿಣೇತೀರೇ, ಶಾಲಿವಾಹನ ಶಕೇ, ಅಸ್ಮಿನ್ ವರ್ತಮಾನೇ, ...... ನಾಮ ಸಂವತ್ಸರೇ.... ಅಯನೇ ...... ಋತೌ ...... ಮಾಸೇ..... ಪಕ್ಷೇ..... ತಿಥೌ......... ವಾಸರೇ....... ದಿವಸ ನಕ್ಷತ್ರೇ ................. ಆಮುಕಸ್ಥಿತೇ ವರ್ತಮಾನೇ ಚಂದ್ರೇ, ಆಮುಕ ಶ್ರೀ ಸೂರ್ಯೇ ಆಮುಕಸ್ಥಿತೇ ದೇವ ಗೇಣೆ, ಶ್ರೇಷಸುಗ್ರಹೇಷು ಯಥಾರಾಶಿಸ್ಥಾನ ಸತ್ಸು, ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭ ಪುಣ್ಯತಿಥೌ ಮಮ ಆತ್ಮನಃ ಚತುರ್ವಿಧ ಪುರುಷಾರ್ಥ ಸಿದ್ಧ್ಯರ್ಥಂ ಮಮೇಪ್ಸಿತ ಫಲ ಪ್ರಾಪ್ತಯೇ - ಸ್ತ್ರೀ-ಕುಮಾರಿ ಅಖಂಡ ಸೌಭಾಗ್ಯಾದಿ ಸಕಲ ಸರ್ವದಾ ಮನೋರಥ ಸಿದ್ಧ್ಯರ್ಥಂ ಷೋಡಶ ಸೋಮವಾರ ವ್ರತಾಂಗತ್ವೇನ ಶ್ರೀ ಪಾರ್ವತೀ ಪರಮೇಶ್ವರ ಪ್ರೀತ್ಯರ್ಥಂ ಯಥಾ ಜ್ಞಾನೇನ ಯಥಾಮಿಲಿತೋಪಚಾರ ದ್ರವ್ಯೈಃ

ಶಿವಲಿಂಗ ಪೂಜನಮಹಂ ಕರಿಷ್ಯೇ । ತಥಾ ಚ ಆಸನಾದಿ ಕಲಶಾರಾಧನಂ, ಶಂಖ ಘಂಟಾರ್ಚನಂ ಚ ಕರಿಷ್ಯೇ । ತತ್ರದೌ ನಿರ್ವಿಘ್ನತಾ ಸಿದ್ಧ್ಯರ್ಥಂ ಮಹಾಗಣಪತಿ ಪೂಜನಂ ಚ ಕರಿಷ್ಯೇ ॥

**ಶ್ರೀಮನ್ಮಹಾಗಣಪತಿ ಪೂಜಾಂ** *(ಹೂವುಗಳಿಂದ ಪೂಜಿಸುತ್ತಾ)*

ವಕ್ರ ತುಂಡ ಮಹಾಕಾಯ ಕೋಟಿ ಸೂರ್ಯ ಸಮಪ್ರಭ ।
ನಿರ್ವಿಘ್ನಂ ಕುರುಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಮಹಾಗಣಪತಯೇ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ, ಮಹಾಗಣಪತಯೇ ನಮಃ ಆವಾಹನಂ, ಆಸನಂ, ಪಾದ್ಯಂ, ಅರ್ಘ್ಯಂ, ಆಚಮನಂ, ಸ್ನಾನಂ, ವಸ್ತ್ರಂ, ಗಂಧಂ, ಧೂಪಂ, ದೀಪಂ, ನೈವೇದ್ಯಂ, ಮಂತ್ರಪುಷ್ಪಂ, ಪ್ರದಕ್ಷಿಣ ನಮಸ್ಕಾರಂ ಸಮರ್ಪಯಾಮಿ। ಚಾಮರ, ಗೀತ, ನೃತ್ಯ, ವಾದ್ಯಾದಿ ಸಮಸ್ತ ರಾಜೋಪಚಾರಂ ಸಮರ್ಪಯಾಮಿ॥

**ಕಲಶಾರಾಧನಂ** *(ಕಲಶದ ಮೇಲೆ ಬಲ ಕೈ ಇಟ್ಟುಕೊಂಡು)*

ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।
ನರ್ಮದೇ ಸಿಂಧು ಕಾವೇರೀ ಜಲೇಸ್ಮಿನ್ ಸನ್ನಿಧಿಂ ಕುರು ॥

॥ಕಲಶದೇವತಾಭ್ಯೋ ನಮಃ ವ್ರತ ಪೂಜಾರ್ಥೇ ಅಕ್ಷತಾನ್ ಸಮರ್ಪಯಾಮಿ ॥

**ಶಂಖಪೂಜಾಂ**

ಪಾಂಚಜನ್ಯಾಯ ವಿದ್ಮಹೇ ಪೂವಮಾನಾಯ ಧೀಮಹಿ ।
ತನ್ನೋ ಶಂಖಃ ಪ್ರಚೋದಯಾತ್ ॥

॥ಶಂಖ ದೇವತಾಭ್ಯೋ ನಮಃ ವ್ರತ ಪೂಜಾರ್ಥೇ ಅಕ್ಷತಾನ್ ಸಮರ್ಪಯಾಮಿ ॥

**ಘಂಟಾರ್ಚನಂ** *(ಗಂಟೆ ಮೊಳಗಿಸಬೇಕು)*

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಮ್ ॥

॥ ಘಂಟಾದೇವತಾಭ್ಯೋ ನಮಃ ವ್ರತ ಪೂಜಾರ್ಥೇ ಅಕ್ಷತಾನ್ ಸಮರ್ಪಯಾಮಿ ॥



**ಪ್ರೋಕ್ಷಣಂ** *(ಮೊದಲು ತನ್ನನ್ನೂ ಪೂಜಾ ದ್ರವ್ಯಗಳನ್ನೂ ಕಲಶದ ನೀರಿನಿಂದ ಪ್ರೋಕ್ಷಿಸಿಕೊಳ್ಳಬೇಕು)*

ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಪಿ ವಾ ।
ಯಃ ಸ್ಮರೇತ್ಪುಂಡರೀಕಾಕ್ಷಂ ಸಭಾಹ್ಯಾಭ್ಯಂತರಶ್ಶುಚಿಃ ॥

**ಗೌರೀ ಧ್ಯಾನಂ**

ಪ್ರತಿಮಾಯಾಂ ಹಿರಣ್ಮಯ್ಯಾಂ ಮೇಹಿಪರ್ವತ ಕನ್ಯಕೇ ।
ನಮಸ್ಯಾಮಿ ಪದಾಬ್ಜಿಂ ತೇ ಪುಮರ್ಥ ಪ್ರತಿಪತ್ತಯೇ ॥

**ವೃಷಭ ಧ್ಯಾನಂ**

ಚತುಷ್ಪಾತ್ ಕೃತಸಂಜ್ಞಾಯ ನೀಲಕಂಠಾಯ ಶಂಭುವೇ ।
ಅಮರಸ್ತುತ್ಯ ಪಾದಾಬ್ಜಯುಗಳಾಯ ನಮೋನಮಃ ॥

॥ ಶ್ರೀ ಸಾಂಬಸದಾಶಿವಾಯ ನಮಃ – ಧ್ಯಾನಂ ಸಮರ್ಪಯಾಮಿ ॥

**ಆವಾಹನಂ**

ಆಗಚ್ಛ ದೇವದೇವೇಶ ತೇಜೋರಾಶೇ ಜಗತ್ಪತೇ ।
ಇಮಂ ಪೂಜಾ ಮಯಾದತ್ತಾಂ ಗೃಹಾಣಾಂ ಪರಮೇಶ್ವರ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ – ಆವಾಹನಂ ಸಮರ್ಪಯಾಮಿ ॥

**ಆಸನಂ**

ನಾನಾ ರತ್ನ ಸಮಾಯುಕ್ತಂ ಹೇಮಪತ್ರ ಪ್ರಭಾಮಯಮ್ ।
ಆಸನಂ ಸ್ವಗೃಹಾಣೇದಂ ದೇವೇಶ ಅಗಜಾಧವ ॥

॥ ಶ್ರೀ ಸಾಂಬಸದಾಶಿವದೇವತಾಭ್ಯೋ ನಮಃ – ಆಸನಂ ಸಮರ್ಪಯಾಮಿ॥

**ಪಾದ್ಯಂ**

ಗಂಧಪುಷ್ಪಾಕ್ಷತೈರ್ಯುಕ್ತಂ ಪಾತ್ರಸ್ಥಂ ಪಾಪನಾಶನಮ್ ।
ಗಂಗಾಜಲ ಸಮಾನೀತಂ ಪಾದ್ಯಾರ್ಥಂ ಪ್ರತಿಗೃಹ್ಯತಾಮ್ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ – ಪಾದಯೋಃ ಪಾದ್ಯಂ ಸಮರ್ಪಯಾಮಿ ॥

## ಅರ್ಘ್ಯಂ

ಭಕ್ತ್ಯಾ ಸಮಾಹೃತಂ ತೋಯಂ ಗಂಧಪುಷ್ಪಸಮನ್ವಿತಮ್ ।
ಅರ್ಘ್ಯಂ ಗೃಹಾಣ ದೇವೇಶ ಪಾರ್ವತೀ ಪ್ರಿಯವಲ್ಲಭ ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಅರ್ಘ್ಯಂ ಸಮರ್ಪಯಾಮಿ॥

## ಆಚಮನಂ

ಕರ್ಪೂರವಾಸಿತಂತೋಯಂ ಸ್ವಾದುಶೀತಲಮಾಹೃತಮ್ ।
ಆಚಮ್ಯತಾಂ ಸುರಶ್ರೇಷ್ಠಭೂತೇಶ ಕರುಣಾನಿಧೇ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ–ಆಚಮನೀಯಂ ಸಮರ್ಪಯಾಮಿ॥

## ಸ್ನಾನಂ

ಗಂಗಾದಿ ಸರ್ವ ತೀರ್ಥೇಭ್ಯೋ ತೋಯಮೇತತ್ಸುನಿರ್ಮಲಮ್ ।
ಆನೀತಂತು ಮಹಾದೇವ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಮಲಾಪಕರ್ಷಸ್ನಾನಂ ಸಮರ್ಪಯಾಮಿ॥

## ಪಂಚಾಮೃತ ಸ್ನಾನಂ

ಹಾಲು : ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಂ ।
ಭವಾವಾಜಸ್ಯ ಸಂಗಥೇ ಕ್ಷೀರೇಣ ಸ್ನಪಯಾಮಿ॥

ಮೊಸರು : ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯವಾಜಿನಃ ।
ಸುರಭಿನೋ ಮುಖಾಕರತ್ಪ್ರಣ ಆಯೂಗ್ಂ
ಷಿತಾರಿಷತ್। ದಧ್ನಾ ಸ್ನಪಯಾಮಿ॥

ತುಪ್ಪ : ಶುಕ್ರಮಸಿ ಜ್ಯೋತಿರಸಿ ತೇಜೋಸಿ ದೇವೋವಃ
ಸವಿತೋತ್ಪುನಾಚ್ಛಿದ್ರೇಣ
ಪವಿತ್ರೇಣವಸೋಸ್ಸೂರಶ್ಮಿಭಿಃ। ಆಜ್ಯೇನ ಸ್ನಪಯಾಮಿ॥

ಜೇನುತುಪ್ಪ : ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ।
ಮಾಧ್ವೀರ್ನಃ ಸಂತೋಷಧೀಃ। ಮಧುನಕ್ತಮುತೋಸೋ



ಮಧುವತ್ಪಾರ್ಥಿವಂ ರಜಃ । ಮಧುದ್ಯೌರಸ್ತುನಃ । ಪಿತಾ ।
ಮಾಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತುಸೂರ್ಯಃ ।
ಮಾಧ್ವೀರ್ಗಾವೋ ಭವಂತು ನಃ। ಮಧುನಾ ಸ್ನಪಯಾಮಿ॥

ಸಕ್ಕರೆ : ಸ್ವಾಧು ಪವಸ್ಯ ದಿವ್ಯಾಯ ಜನ್ಮನೇಸ್ವಾದುರಿಂದ್ರಾಯ
ಸುಹವೀತುನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ
ವಾಯವೇ ಬಹಸ್ಪತಯೇ ಮಧುಮಾಂ ಅದಾಭ್ಯಃ ।
ಶರ್ಕರಯಾ ಸ್ನಪಯಾಮಿ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ–ಪಂಚಾಮೃತ ಸ್ನಾನಂ ಸಮರ್ಪಯಾಮಿ ॥

ಫಲೋದಕಸ್ನಾನ : ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚಪುಷ್ಪಿಣೀಃ।
ಬೃಹಸ್ಪತಿಪ್ರಸೂತಾಸ್ತಾನೋಮುಂಚಂತ್ವಂಹಸಃ ।
ಫಲೋದಕೇನ ಸ್ನಪಯಾಮಿ ॥

## ಮಹಾಭಿಷೇಕಂ

ಮಂದಾಕಿನ್ಯಾಃ ಸಮಾನೀತ ಯಮುನಾ ಗೌತಮೀ ಜಲಮ್ ।
ಕೃಷ್ಣಾಚ ನರ್ಮದಾ ತಾಪಿತುಭ್ಯಂ ಸ್ನಾನಾರ್ಥಂ
ಮಾಹೃತಮಣ । ಶ್ರೀ ಸಾಂಬಸದಾಶಿವ ದೇವತಾಭ್ಯೋ
ನಮಃ–ಮಹಾಭಿಷೇಕ ಸ್ನಾನಂ ಸಮರ್ಪಯಾಮಿ ॥
ಸ್ನಾನಾನಂತರಂ ಪುನರಾಚಮನೀಯಂ ಸಮರ್ಪಯಾಮಿ ॥

## ವಸ್ತ್ರಂ

ಸೂಕ್ಷ್ಮ ತಂತು ಮಯಂ ವಸ್ತ್ರಶ್ವೇತವರ್ಣಂ ಸುಶೋಭಿತಮ್ ।
ಪ್ರಾವರಣಾರ್ಥಂ ಪ್ರದಾಸ್ಯಾಮಿ ಗೃಹ್ಯಾಂತಾಂ ಸುರಸತ್ತಮ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ – ವಸ್ತ್ರಂ ಸಮರ್ಪಯಾಮಿ॥

**ಯಜ್ಞೋಪವೀತಂ**

ವೇದಸೂಕ್ತಸಮಾಯುಕ್ತಂ ಬ್ರಹ್ಮವಿಷ್ಣುಶಿವಾತ್ಮಕಮ್ ।
ಉಪವೀತಂ ಪ್ರದಾಸ್ಯಾಮಿ ಸ್ವೀಕುರುಷ್ವ ದಯಾನಿಧೇ ॥

**ಅಥ ಅಂಗಪೂಜಾಂ ಚ ಕರಿಷ್ಯೆ**

ಶಿವಾಯ ನಮಃ– ಪಾದೌ ಪೂಜಯಾಮಿ । ಶಂಕರಾಯ ನಮಃ – ಗುಲ್ಫೌ ಪೂಜಯಾಮಿ । ಭವಹಾರಿಣೇ ನಮಃ– ಜಾನುನೀ ಪೂಜಯಾಮಿ । ಶೂಲಪಾಣಯೇ ನಮಃ– ಕಟಿಂ ಪೂಜಯಾಮಿ । ಶಂಭವೇ ನಮಃ–ಗುಹ್ಯಂ ಪೂಜಯಾಮಿ । ಮಹಾದೇವಾಯ ನಮಃ– ನಾಭಿಂ ಪೂಜಯಾಮಿ । ವಿಶ್ವಕರ್ತ್ರೇ ನಮಃ– ಉದರಂ ಪೂಜಯಾಮಿ । ಸರ್ವತೋಮುಖಾಯ ನಮಃ– ಪಾರ್ಶ್ವೌ ಪೂಜಯಾಮಿ। ಸ್ಥಾಣವೇ ನಮಃ–ಸ್ತನೌ ಪೂಜಯಾಮಿ । ನೀಲಕಂಠಾಯ ನಮಃ– ಕಂಠಂ ಪೂಜಯಾಮಿ । ಮಹಾದೇವಾಯ ನಮಃ– ಮುಖಂ ಪೂಜಯಾಮಿ । ತ್ರಿನೇತ್ರಾಯ ನಮಃ– ನೇತ್ರಂ ಪೂಜಯಾಮಿ । ಶರ್ವಾಯ ನಮಃ– ಲಲಾಟಂ ಪೂಜಯಾಮಿ । ಶಶಿಭೂಷಣಾಯ ನಮಃ– ಶಿರಃಪೂಜಯಾಮಿ । ದೇವಾಧೀಶಾಯ ನಮಃ– ಸರ್ವಾಂಗಾನಿ ಪೂಜಯಾಮಿ ॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಅಂಗಪೂಜಾಂ ಸಮರ್ಪಯಾಮಿ ॥

**ಅಥ ಪುಷ್ಪಪೂಜಾಂ :-**

ಸೋಮೇಶ್ವರಾಯ ನಮಃ– ಸುಗಂಧರಾಜ ಪುಷ್ಪಂ ಸಮರ್ಪಯಾಮಿ । ಈಶಾನಾಯ ನಮಃ– ಶಂಭುಪುಷ್ಪಂ ಸಮರ್ಪಯಾಮಿ । ಶಂಕರಾಯ ನಮಃ– ಕರ್ಣಿಕಾರಪುಷ್ಪಂ ಸಮರ್ಪಯಾಮಿ । ಗಿರಿಜಾಧವಾಯ ನಮಃ– ಗಿರಿಪುಷ್ಪಂ ಸಮರ್ಪಯಾಮಿ । ಮಹೇಶಾಯ ನಮಃ– ಮಲ್ಲಿಕಾಪುಷ್ಪಂ



ಸಮರ್ಪಯಾಮಿ । ಸರ್ವತೇಶಾಯ ನಮಃ– ಸೇವಂತಿಕಾಪುಷ್ಪಂ ಸಮರ್ಪಯಾಮಿ । ಭೂಸ್ಮರಾರಯೇ ನಮಃ– ಭೃಂಗಪುಷ್ಪಂ ಸಮರ್ಪಯಾಮಿ । ತ್ರಿಪುರಾಂತಕಾಯ ನಮಃ– ಕುಂದಪುಷ್ಪಂ ಸಮರ್ಪಯಾಮಿ ॥

॥ ಶ್ರೀ ಸಾಂಬಸದಾಶಿವದೇವತಾಭ್ಯೋ ನಮಃ– ಪುಷ್ಪಪೂಜಾಂ ಸಮರ್ಪಯಾಮಿ ॥

**ಅಥ ಪತ್ರಪೂಜಾಂ :-**

ಶಿವಾಯ ನಮಃ– ಬಿಲ್ವಪತ್ರಂ ಸಮರ್ಪಯಾಮಿ । ಪಶುಪತಯೇ ನಮಃ– ನಂದ್ಯಾವರ್ತಪತ್ರಂ ಸಮರ್ಪಯಾಮಿ। ಶಂಭವೇ ನಮಃ– ದಾಡಿಮೀಪತ್ರಂ ಸಮರ್ಪಯಾಮಿ। ತ್ರ್ಯಂಬಕಾಯ ನಮಃ– ಕುಂದಪತ್ರಂ ಸಮರ್ಪಯಾಮಿ। ಚಂದ್ರಶೇಖರಾಯ ನಮಃ– ಅರ್ಕಪತ್ರಂ ಸಮರ್ಪಯಾಮಿ। ಗಂಗಾಧರಾಯ ನಮಃ– ದ್ರೋಣಪತ್ರಂ ಸಮರ್ಪಯಾಮಿ। ಮಹಾದೇವಾಯ ನಮಃ– ದವನಪತ್ರಂ ಸಮರ್ಪಯಾಮಿ। ವಾಮದೇವಾಯ ನಮಃ– ಮರುಗಪತ್ರಂ ಸಮರ್ಪಯಾಮಿ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಪತ್ರಪೂಜಾಂ ಸಮರ್ಪಯಾಮಿ॥

**ಅಥ ನಾಮಪೂಜಾಂ :-**

ಭವಾಯ ನಮಃ। ಶರ್ವಾಯ ನಮಃ। ರುದ್ರಾಯ ನಮಃ। ಪಶುಪತಯೇ ನಮಃ। ಉಗ್ರಾಯ ನಮಃ । ಮಹತೇ ನಮಃ । ಭೀಮಾಯ ನಮಃ । ಈಶಾನಾಯ ನಮಃ । ಸದ್ಯೋಜಾತಾಯ ನಮಃ । ವಾಮದೇವಾಯ ನಮಃ । ಅಘೋರಾಯ ನಮಃ । ತತ್ಪುರುಷಾಯ ನಮಃ ॥

॥ ಶ್ರೀ ಸಾಂಬದಸಾಶಿವ ದೇವತಾಭ್ಯೋ ನಮಃ– ನಾಮಪೂಜಾಂ ಸಮರ್ಪಯಾಮಿ ॥

*(ಇಲ್ಲಿ ಶಿವಾಷ್ಟೋತ್ತರ, ಅಥವಾ ಶಿವ ಸಹಸ್ರನಾಮ ಹೇಳಬಹುದು).*

**ಗಂಧಂ**

ಶ್ರೀಖಂಡ ಚಂದನಂ ದಿವ್ಯ ಗಂಧಾಢ್ಯಂ ಸುಮನೋಹರಮ್।
ವಿಲೇಪನಂ ಸುರಶ್ರೇಷ್ಠ ಚಂದನಂ ಪ್ರತಿಗೃಹ್ಯತಾಮ್ ॥

॥ಶ್ರೀ ಸಂಬಾಸದಾಶಿವ ದೇವತಾಭ್ಯೋ ನಮಃ– ಗಂಧಂ ಸಮರ್ಪಯಾಮಿ॥

**ಪುಷ್ಪಂ (ಹೂ ಅರ್ಪಿಸುತ್ತಾ)**

ಮಾಲ್ಯಾದೀನಿ ಸುಗಂಧಿ ವೈ। ಪ್ರಭೋ ಮಯಾಹೃತಾನಿ
ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಮ್ ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಪುಷ್ಪಂ ಸಮರ್ಪಯಾಮಿ ॥

**ಧೂಪಂ** *(ಊದುಬತ್ತಿ ಬೆಳಗುತ್ತಾ)*

ವನಸ್ಪತಿರಸೋದ್ಭೂತೋ ಗಂಧಾಢ್ಯೋ ಧೂಪ ಉತ್ತಮಮ್।
ಆಘ್ರೇಯಸ್ಸರ್ವ ದೇವಾನಾಂ ಧೂಪೋಯಂ ಪ್ರತಿಗೃಹ್ಯತಾಮ್॥

॥ ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಧೂಪಂ ದರ್ಶಯಾಮಿ॥

**ದೀಪಂ** *(ಏಕಾರ್ತಿದೀಪ ಬೆಳಗಿ)*

ಸಾಜ್ಯಂ ಚ ವರ್ತಿಸಂಯುಕ್ತಂ ವಹ್ನಿನಾ ಯೋಜಿತಂ।
ದೀಪಂ ಗೃಹಾಣ ದೇವೇಶ ತ್ರೈಲೋಕ್ಯತಿಮಿರಾಪಹಂ।

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ – ದೀಪಂ ದರ್ಶಯಾಮಿ ॥

**ನೈವೇದ್ಯಂ** *(ನೈವೇದ್ಯ ಅರ್ಪಿಸಿ)*

ಶರ್ಕರಾ ಖಂಡಖಾದ್ಯಾನಿ ದಧಿಕ್ಷೀರ ಘೃತಾನಿ ಚ। ಆಹಾರಂ ಭಕ್ಷ್ಯಂ ಭೋಜ್ಯಂ ಚ ನೈವೇದ್ಯಂ ಪ್ರತಿಗೃಹ್ಯತಾಮ್ ॥

॥ ಶ್ರೀ ಸಾಂಸದಾಶಿವ ದೇವತಾಭ್ಯೋ ನಮಃ ನೈವೇದ್ಯಂ ಸಮರ್ಪಯಾಮಿ ॥



ಓಂ ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ಓಂ ವ್ಯಾನಾಯ ಸ್ವಾಹಾ, ಓಂ ಉದಾನಾಯ ಸ್ವಾಹಾ, ಓಂ ಸಮಾನಾಯ ಸ್ವಾಹಾ, ಓಂ ಬ್ರಹ್ಮಣೇ ಸ್ವಾಹಾ। ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ। ಉತ್ತರಾಪೋಶನಂ ಸಮರ್ಪಯಾಮಿ, ಹಸ್ತ ಪ್ರಕ್ಷಾಳನಂ ಸಮರ್ಪಯಾಮಿ, ಮುಖಪ್ರಕ್ಷಾಳನಂ ಸಮರ್ಪಯಾಮಿ। ಕರೋದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ ॥

**ತಾಂಬೂಲಂ** *(ತೆಂಗಿನಕಾಯಿ – ವೀಳ್ಯದೆಲೆ – ಅಡಿಕೆಯ ತಾಂಬೂಲ ಅರ್ಪಿಸುತ್ತಾ)*

ಪೂಗೀಫಲ ತಾಂಬೂಲಂ ಮಹದ್ದಿವ್ಯಂ ನಾಗವಲ್ಲೀದಳೈರ್ಯುತಮ್ ಕರ್ಪೂರಾದಿಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ।

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ ಪೂಗೀಫಲ ತಾಂಬೂಲಂ ಸಮರ್ಪಯಾಮಿ॥

**ಸುವರ್ಣಪುಷ್ಪ ದಕ್ಷಿಣಾಂ :-**

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತ ಪುಣ್ಯಫಲದಂ। ಶಾಂತಿಂ ಪ್ರಯಚ್ಛಮೇ ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ – ಸುವರ್ಣ ಪುಷ್ಪ ದಕ್ಷಿಣಾಂ ಸಮರ್ಪಯಾಮಿ॥

**ಫಲ ಸಮರ್ಪಣಂ** *(ಪೂರ್ಣ ಫಲದ ತೆಂಗಿನಕಾಯನ್ನು ದೇವರ ಬಲಭಾಗದಲ್ಲಿಡಬೇಕು)*

ಇದಂ ಫಲಂ ಮಯಾ ದೇವ ಸ್ಥಾಪಿತಂ ಪುರುತಸ್ತವ।
ತೇನ ಮೇ ಸಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಪೂರ್ಣಫಲಂ ಸರ್ಮಯಾಮಿ॥

**ಮಹಾನೀರಾಜನಂ** *(ಮಹಾಮಂಗಳಾರತಿ ಬೆಳಗುವುದು)*

ಚಂದ್ರಾದಿತ್ಯೌ ಚ ಧರಣೀ ವಿದ್ಯುದಗ್ನಿಸ್ತಥೈವ ಚ ।
ತ್ವಮೇವ ಸರ್ವ ಜ್ಯೋತಿಷಂ ಆರ್ತಿಕ್ಯಂ ಪ್ರತಿಗೃಹ್ಯತಾಮ್ ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ – ಮಹಾನೀರಾಜನಂ ಸಮರ್ಪಯಾಮಿ ॥

**ಕರ್ಪೂರಾರತೀಮ್ :**

ಕರ್ಪೂರಗೌರಂ ರುಣಾವತಾರಂ ಸಂಸಾರಸಾರಂ .
ಭುಜಗೇಂದ್ರಹಾರಮ್।
ಸದಾವಸಂತಂ ಹೃದಯಾರವಿಂದೇ ಭವಂ ಭವಾನಿ ಸಹಿತಂ ನಮಾಮಿ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ– ಕರ್ಪೂರಾರತೀಂ ಸಮರ್ಪಯಾಮಿ ॥

**ಮಂತ್ರಪುಷ್ಪಂ**

ಋತಗ್ಂ ಸತ್ಯಂ ಪರಬ್ರಹ್ಮಪುರುಷಂ ಕೃಷ್ಣಪಿಂಗಳಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ–ಮಂತ್ರಪುಷ್ಪಂ ಸಮರ್ಪಯಾಮಿ॥

**ಪ್ರದಕ್ಷಿಣಂ :**

ಯಾನಿಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।
ತಾನಿತಾನಿ ವಿನಶ್ಯಂತಿ ಪ್ರದಕ್ಷಿಣಂ ಪದೇಪದೇ ॥

॥ಶ್ರೀ ಸಾಂಬಸದಾಶಿವ ದೇವತಾಭ್ಯೋ ನಮಃ–ಪ್ರದಕ್ಷಿಣಾನ್ ಸಮರ್ಪಯಾಮಿ॥

**ನಮಸ್ಕಾರಂ** *(ಎಂಟು ಸಲ ಪ್ರದಕ್ಷಿಣೆ ಮಾಡಿ ನಂತರ ನಮಸ್ಕಾರ ಹಾಕಬೇಕು)*

ಓಂ ನಮೋ ವೀರಭದ್ರಾಯ ರುದ್ರಾಯ ನಮಃ। ಓಂ ನಮೋ ಶಂಭುವೇ ರುದ್ರಾಯ ನಮಃ। ಓಂ ನಮೋ ಗಿರೀಶಾಯ ರುದ್ರಾಯ ನಮಃ। ಓಂ ನಮೋ ಭೈರವಾಯ ರುದ್ರಾಯ ನಮಃ। ಓಂ ನಮೋ ಪಿನಾಕಿನೇ ರುದ್ರಾಯ ನಮಃ। ಓಂ ನಮೋ ಸ್ಥಾಣವೇ ರುದ್ರಾಯ



ನಮಃ। ಓಂ ನಮೋ ಭರ್ಗಾಯ ರುದ್ರಾಯ ನಮಃ। ಓಂ ನಮೋ ಸದಾಶಿವಾಯ ರುದ್ರಾಯ ನಮಃ॥

**ಪ್ರಾರ್ಥನಾಂ** *(ಬಿಡಿ ಹೂಗಳನ್ನು ಸಮರ್ಪಿಸುತ್ತಾ)*

ಶಂಭೋ ಪ್ರಸೀದ ದೇವೇಶ ಸರ್ವಲೋಕೇಶ್ವರ ಪ್ರಭೋ।
ತವರೂಪ ಪ್ರದಾನೇನೇ ಮಮಸಂತು ಮನೋರಥ॥

**ಅರ್ಘ್ಯಂ** *(ಮೂರು ಸಲ ಅರ್ಘ್ಯ ಕೊಡುವುದು)*

ಶ್ರೀ ಸಾಂಬಸದಾಶಿವ ದೇವಪ್ರೀತ್ಯರ್ಥೇ ಪೂಜಾಸಾಂಗತಾ ಸಿದ್ಧ್ಯರ್ಥಂ ಅರ್ಘ್ಯಂ ಪ್ರಧಾನಂ ಚ ಕರಿಷ್ಯೇ। ಓಂಕಾರ ಪೂರ್ವಕಂ ದೇವಂ ಸರ್ವದುಃಖ ನಿವಾರಕಂ। ಪಾರ್ವತೀ ಪ್ರಿಯ ದೇವೇಶ ಗೃಹಾಣಾರ್ಘ್ಯಂನಮೋಸ್ತುತೇ ಇದಮರ್ಘ್ಯಂಸಮರ್ಪಯಾಮಿ॥೧॥

ಜನ್ಮಜನ್ಮಾರ್ಜಿತ ಪಾಪಂ ಬುದ್ಧ್ಯಾರ್ಜಿತಂ ಮಯಾ। ತತ್ಸರ್ವಂ ಕ್ಷಮ್ಯತಾಂ ದೇವ ಗೃಹಾಣಾರ್ಘ್ಯಂ ನಮೋಸ್ತುತೇ ಇದಮರ್ಘ್ಯಂ ಸಮರ್ಪಯಾಮಿ ॥೨॥

ಮೃಗನಾಭಿ ಸಮಾಯುಕ್ತಂ ಕದಳೀ ಸಂಭವಾನ್ವಿತ। ಗೃಹಾಣ ಗಿರಿಜಾನಾಥ ಮದ್ದತ್ತಾರ್ಘ್ಯಂ ನಮೋಸ್ತುತೇ ಇದಮರ್ಘ್ಯಂ ಸಮರ್ಪಯಾಮಿ ॥೩॥

**ಪುನಃ ಪೂಜಾಂ :**

ಛತ್ರಂ ಸಮರ್ಪಯಾಮಿ। ಚಾಮರಂ ಸಮರ್ಪಯಾಮಿ। ಗೀತಂ ಶ್ರಾವಯಾಮಿ। ನೃತ್ಯಂ ಸಮರ್ಪಯಾಮಿ। ವಾದ್ಯಂ ಸಮರ್ಪಯಾಮಿ। ಸಮಸ್ತರಾಜೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ ॥

(ಅಕ್ಷತೆಕಾಳನ್ನು ಅರ್ಪಿಸುವುದು)

**ವ್ರತ ಸಾಂಗತಾಂ :** *(ಅಕ್ಷತೆ ನೀರು ಕೈಯಲ್ಲಿ ಹಿಡಿದು)*

ಯದ್ಭಕ್ತ್ಯಾ ದೇವದೇವೇಶ ಮಯಾವ್ರತಮಿದಂ ಕೃತಮ್ ।
ನ್ಯೂನಂ ವಾಥ ಕ್ರಿಯಾಹೀನಂ ಪರಿಪೂರ್ಣಂ ತದಸ್ತು ಮೇ ॥

(ಅಕ್ಷತೆ ನೀರು ತಟ್ಟೆಯಲ್ಲಿ ಬಿಡುವುದು)

**ವಾಯನದಾನಂ :**

ಆದ್ಯ ಪೂರ್ವೋಚ್ಚರಿತ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಶುಭ ಪುಣ್ಯತಿಥೌ ಮಮ ಆತ್ಮನಃ ಪುರಾಣೋಕ್ತ ಫಲಪ್ರಾಪ್ತ್ಯರ್ಥಂ ಕೃತಾಯಃ ಸಾಂಗತಾ ಸಿದ್ಧ್ಯರ್ಥಂ ಬ್ರಾಹ್ಮಣಾಯ ವಾಯನ ಪ್ರಧಾನಂ ಕರಿಷ್ಯೇ । ತಥಾ ಚ ಬ್ರಾಹ್ಮಣ ಪೂಜನಂ ಚ ಕರಿಷ್ಯೇ ॥ (ವ್ರತ ಮಾಡಿಸಿದ ಋತ್ವಿಕರಿಗೆ ಕೊಡುವುದು)

**ವಾಯನ ಪೂಜಾಂ :**

ಸಾಂಬಸದಾಶಿವಸ್ವರೂಪಿಣೇ ಬ್ರಾಹ್ಮಣಾಯ ಇದಮಾಸನಂ। ಸಾಸನಂ ಇದಂ ಪಾದ್ಯಂ ಸುಪಾದ್ಯಂ। ಇದಮರ್ಘ್ಯಂ ಅಸ್ತ್ವರ್ಘ್ಯಂ। ಇದಮಾಚಮನೀಯಂ। ಗಂಧಾಃ ಪಾಂತು, ಸೌಮಂಗಲ್ಯಂ ಚಾಸ್ತು। ಅಕ್ಷಾತಾಃ ಪಾಂತುಃ ಆಯುಷ್ಯಮಸ್ತು ಪುಷ್ಪಾಣಿ ಪಾಂತು ಸೌಶ್ರೇಯಮಸ್ತು। ತಾಂಬೂಲಾನಿ ಪಾಂತು ಐಶ್ವರ್ಯಮಸ್ತು ದಕ್ಷಿಣಾಃ ಪಾಂತು ಬಹುದೇಯಂ ಚಾಸ್ತು। ದೀರ್ಘಮಾಯುಃ ಶ್ರೇಯಃ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು। ನಮೋಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿಶಿರೋರು– ಬಾಹವೇ। ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟಿ– ಯುಗಧಾರಿಣೇ ನಮಃ॥

(ಆಚಾರ್ಯರ ಶಿರಸ್ಸಿನಲ್ಲಿ ಅಕ್ಷತೆ ಹಾಕಬೇಕು)

ವಾಯನಂ ಫಲಂ ಸಂಯುಕ್ತಂ ಸಘೃತಂ ದಕ್ಷಿಣಾನ್ವಿತಮ್ ದ್ವಿಜವರ್ಯಾಯ ಪ್ರದಾಸ್ಯಾಮಿ ವ್ರತಸಂಪೂರ್ಣ ಹೇತವೇ ॥ ಭವಂತಃ ಪ್ರತಿಗೃಹ್ಣಾಂತು, ಜ್ಯೋತಿರೂಪಾಸ್ತಪೋಧನಾಃ। ಇದಂ



ವಾಯನದಾನಂ ಸದಕ್ಷಿಣಾಂ ಸತಾಂಬೂಲಂ ಆಮುಕಶರ್ಮಣೇ ಬ್ರಾಹ್ಮಣಾಯ ತುಭ್ಯಮಹಂ ಸಂಪ್ರದದೇ। ಪ್ರತಿಗೃಹ್ಯತಾಮ್। ಪ್ರತಿಗೃಹ್ಯಾಮಿ ಅನೇನ ವಾಯನ ದಾನೇನ ಶ್ರೀ ಸಾಂಬಸದಾಶಿವ ದೇವಃ ಪ್ರಿಯತಾಮ್। ತತ್ಸರ್ವಂ ಬ್ರಹ್ಮಾರ್ಪಣಮಸ್ತು॥

**ಉತ್ಸರ್ಜನಂ :** *(ದೇವರನ್ನು ಕದಲಿಸುವುದು)*

ಯಾಂತು ದೇವಗಣಾಃ ಸರ್ವೇ ಪೂಜಮಾದಾಯ ಪಾರ್ಥಿವೀಮ್।
ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥಂ ಪುನರಾಗಮನಾಯಚ ॥

(ಅಕ್ಷತೆಹಾಕಿ ಪ್ರತಿಷ್ಠಿತಾ ದೇವತಾಮೂರ್ತಿಯನ್ನು, ಕಲಶವನ್ನು ಬಲಭಾಗಕ್ಕೆ ಕದಲಿಸಬೇಕು.)

॥ ವ್ರತಪೂಜಾ ವಿಧಾನಂ ಸಂಪೂರ್ಣಮ್॥

# ಹದಿನಾರು ಸೋಮವಾರ ವ್ರತ ಕಥಾರ್ಥವು

## ಒಂದನೇ ಅಧ್ಯಾಯ

---

ಶೌನಕ ಮಹರ್ಷಿಗಳು ನೈಮಿಷಾರಣ್ಯದಲ್ಲಿ ಅನೇಕ ಋಷಿಗಳಿಂದ ಕೂಡಿ ಲೋಕ ಹಿತಕ್ಕಾಗಿ ಜ್ಞಾನಯಜ್ಞ ನಡೆಸುತ್ತಿದ್ದಾಗ – ಅಲ್ಲಿಗೆ ಆಗಮಿಸಿದ ವ್ಯಾಸಮಹರ್ಷಿಗಳ ಶಿಷ್ಯರಾದ ಸೂತಪುರಾಣಿಕರನ್ನು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ, ಅಲ್ಲಿ ನೆರೆದಿದ್ದ ಋಷಿ ಸಮೂಹ ಸೂತರನ್ನು ಪ್ರಾರ್ಥಿಸುತ್ತಾ, ಎಲೆ ಪುರಾಣಪುಣ್ಯಪುರುಷನೇ; ಲೋಕದಲ್ಲಿನ ಕಷ್ಟಗಳ ಪರಿಹಾರಕ್ಕಾಗಿ ಪ್ರಜೆಗಳು ಯಾವ ವ್ರತಪೂಜೆ ಆಚರಿಸಿದರೆ ಒಳ್ಳೆಯದು ತಿಳಿಸೆನ್ನಲು –

ಅವರ ಪ್ರಾರ್ಥನೆಯನ್ನು ಮನ್ನಿಸುತ್ತಾ, ಸೂತರು, ಹಿಂದೆ ಕೈಲಾಸವಾಸಿ ಪರಮೇಶ್ವರನು – ತನ್ನ ಸತಿ ಪಾರ್ವತಿಗೆ ಒಂದು ರಹಸ್ಯ ವ್ರತ ಉಪದೇಶಿಸಿದ್ದನು. ಅದು ಪರಮ ಮಹಿಮಾನ್ವಿತವಾದದ್ದು,

ಅದನ್ನು ಆಚರಿಸಿದರೆ ಎಲ್ಲ ಕಷ್ಟಗಳೂ ದೂರವಾಗಿ ಜೀವನದಲ್ಲಿ ಸುಖ–ಶಾಂತಿ–ಲಭಿಸುತ್ತವೆ. ಅಂತಹ ವ್ರತವಿಧಾನ – ಕಥೆಯನ್ನು ಈಗ ನಿಮಗೆ ತಿಳಿಸುತ್ತೇನೆ.

ಒಮ್ಮೆ ಕೈಲಾಸಗಿರಿಯಲ್ಲಿ ಸ್ವರ್ಣ ಸಿಂಹಾಸನದಲ್ಲಿ ಆಸೀನನಾಗಿ ಪರಮೇಶ್ವರನು ಪಾರ್ವತಿಯೊಡನೆ ಏಕಾಂತದಲ್ಲಿರಲು, ಆಗ ಪಾರ್ವತಿಯು – ನಾಥಾ, ನಿಮ್ಮಿಂದ ಲೋಕಹಿತಕ್ಕಾಗಿ ಅನೇಕ ವ್ರತವಿಧಾನಗಳನ್ನು ಕೇಳಿರುವೆನು. ಭೂಲೋಕದ ಜನರ ಹಿತಕ್ಕಾಗಿ ಮತ್ತೊಂದು ಪುಣ್ಯಪ್ರದವಾದ ವ್ರತವೊಂದನ್ನು ಕೇಳಲಿಚ್ಛಿಸುತ್ತೇನೆ. ದಯವಿಟ್ಟು ಅನುಗ್ರಹಿಸಿ ಎಂದು ಪ್ರಾರ್ಥಿಸಲು, ಆಗ ಶಂಕರನು, ಲೋಕಕಲ್ಯಾಣಕ್ಕಾಗಿ ಪಾರ್ವತಿಯ ಪ್ರಾರ್ಥನೆಯಂತೆ ಷೋಡಶ (ಹದಿನಾರು) ಸೋಮವಾರ ವ್ರತವನ್ನು ತಿಳಿಸಿದನು.

ಪಾರ್ವತಿಯು, ಪ್ರಭು–ಈ ಪುಣ್ಯಪ್ರದವಾದ ವ್ರತದ ಆಚರಣೆ ಹಾಗೂ ಅದರಿಂದ ಲಭಿಸುವ ಫಲ–ಕೂಲಂಕುಶವಾಗಿ ತಿಳಿಸಬೇಕೆನ್ನಲು, ಪರಮಶಿವನು ದೇವೀ, ಈ ವ್ರತಪೂಜೆಯನ್ನು ಯಾವ ಸೋಮವಾರ ವಾದರೂ ಆಚರಿಸಬಹುದು. ಅದರಲ್ಲೂ, ಆಷಾಡಹುಣಿಮೆಯಿಂದ ಕಾರ್ತೀಕ ಹುಣ್ಣಿಮೆಯ ವರೆಗಿನ ನಾಲ್ಕು ಮಾಸಗಳು (ಚಾತುರ್ಮಾಸ) ಈ ವ್ರತದ ಆಚರಣೆಗೆ ತುಂಬಾ ಪ್ರಶಸ್ತವಾದದ್ದು ಎಂದು ಹೇಳಿದನು.

ಚಾತುರ್ಮಾಸದ ನಾಲ್ಕು ತಿಂಗಳಲ್ಲಿ ಬರುವ – ಹದಿನಾರು ಸೋಮವಾರಗಳು ಈ ವ್ರತದ ಆಚರಣೆಗೆ ತುಂಬಾ ಶ್ರೇಷ್ಠ ಹಾಗೂ ಫಲದಾಯಕವು. ವ್ರತ ಆಚರಿಸುವ ಸೋಮವಾರ ಪೂರ್ತಿದಿನ ಉಪವಾಸ ಮಾಡಿ, ವ್ರತ ಮುಗಿಸಿದ ನಂತರ ಪ್ರಸಾದ ಸ್ವೀಕರಿಸಬೇಕು.

ವ್ರತ ಆಚರಿಸುವ ಸೋಮವಾರದ ದಿನ ಬೆಳಿಗ್ಗೆ ಸ್ನಾನಾದಿ ನಿತ್ಯಕರ್ಮಗಳನ್ನು ಪೂರೈಸಿ, ಮಡಿಬಟ್ಟೆಗಳನ್ನು ಧರಿಸಿ, ಹುತ್ತದ ಮಣ್ಣನ್ನು ತಂದು ಅದರಿಂದ ಶಿವಲಿಂಗವನ್ನು ನಿರ್ಮಿಸಬೇಕು. ಇತರೇ ಲೋಹ, (ಬೆಳ್ಳಿ–ಚಿನ್ನ) ಗಳಿಂದ ಬೇಕಾದರೂ ಶಿವಲಿಂಗವನ್ನು



ನಿರ್ಮಿಸಬಹುದು. ಪೂಜೆ ಆರಂಭಿಸುವ ಮೊದಲೇ ಅಗತ್ಯವಾದ ಬಿಲ್ವಪತ್ರೆ, ಬಿಡಿಹೂವ್ವು, ಪಂಚಪಾತ್ರೆ, ಉದ್ಧರಣೆ, ಹರಿಶಿನ, ಕುಂಕುಮ, ಅಕ್ಷತೆ, ಧೂಪ–ದೀಪ– ನೈವೇದ್ಯಕ್ಕಾಗಿ ಮಾಡಿರುವ ಭಕ್ಷ್ಯಗಳನ್ನು ಸಿದ್ಧಪಡಿಸಿಕೊಳ್ಳಬೇಕು.

ನೈವೇದ್ಯಕ್ಕೆಂದು ಗೋದಿಹಿಟ್ಟು, ತುಪ್ಪ ಹುರಿದು ಅದಕ್ಕೆ ಬೆಲ್ಲ ಸೇರಿಸಿ ಉಂಡೆ ಮಾಡಿಟ್ಟುಕೊಳ್ಳಬೇಕು. ಈ ಉಂಡೆಗಳನ್ನು ಶಿವಲಿಂಗಕ್ಕೆ ಅರ್ಪಿಸಿ, ನಂತರ ಅದನ್ನು ಮೂರುಭಾಗ ಮಾಡಬೇಕು. ಒಂದು ಭಾಗ ಶಿವಭಕ್ತರಿಗೆ ನೀಡಬೇಕು. ಇನ್ನೊಂದು ಭಾಗ ಗೋವಿಗೆ ನೀಡುವುದು. ಮೂರನೆಯ ಭಾಗವನ್ನು ವ್ರತ ಆಚರಿಸಿದವರು ಕುಟುಂಬದ ಎಲ್ಲರೊಂದಿಗೆ ಭುಂಜಿಸಬೇಕು.

ಹದಿನಾರು ಸೋಮವಾರಗಳು ಶ್ರದ್ಧಾ ಭಕ್ತಿಗಳಿಂದ ಈ ವ್ರತವನ್ನು ಆಚರಿಸಿ ಕೊನೆಯಲ್ಲಿ ಮಣ್ಣಿನಿಂದ ಮಾಡಿದ್ದ ಶಿವಲಿಂಗವನ್ನು ಹರಿಯುವ ನೀರಿನಲ್ಲಿ, ಭಾವಿ, ಕೆರೆಗಳಲ್ಲಿ ವಿಸರ್ಜಿಸಬೇಕು. ಹದಿನೇಳನೆಯ ಸೋಮವಾರದಂದು ವ್ರತವನ್ನು ಸಮಾಪ್ತಿಗೊಳಿಸಿ, ಪುರೋಹಿತರಿಗೆ ದಾನ, ದಕ್ಷಿಣೆಗಳನ್ನು ಕೊಟ್ಟು, ಬ್ರಾಹ್ಮಣ ದಂಪತಿಗಳಿಗೆ ಭಕ್ಷ್ಯಭೋಜ್ಯಗಳ ಊಟ ಮಾಡಿಸಬೇಕು. ಇಲ್ಲಿಗೆ ವ್ರತ ಸಮಾಪ್ತಿಯಾಗುವುದೆಂದು ಶಂಕರನು ಪಾರ್ವತಿಗೆ ತಿಳಿಸಲು ಆಗ ದೇವಿಯು, ನಾಥಾ, ಈ ವ್ರತವು ಯಾರಿಂದ ಆಚರಿಸಲ್ಪಟ್ಟು ಎಂತಹ ಫಲ ಪಡೆದರು ತಿಳಿಸೆನ್ನಲು, ಶಂಕರನು ವ್ರತದ ಮಹಿಮೆಯನ್ನು ಲೋಕಹಿತಕ್ಕಾಗಿ ಪಾರ್ವತಿಗೆ ತಿಳಿಸಿದನು.

ಮೊದಲನೆಯ ಅಧ್ಯಾಯ ಮುಗಿಯಿತು

## ಎರಡನೆಯ ಅಧ್ಯಾಯ

ಸೂತರು, ಶಿವನು ಪಾರ್ವತಿಗೆ ತಿಳಿಸಿದ ವ್ರತಕಥಾ ಮಹಿಮೆಯನ್ನು ಋಷಿಗಳಿಗೆ ತಿಳಿಸಿದರು.

ಮೊದಲಿಗೆ ಪಾರ್ವತಿ ಈ ವ್ರತ ಆಚರಿಸಿ – ಪರಶಿವನನ್ನೇ ಪತಿಯಾಗಿ ಪಡೆದಳು. ಅದನ್ನೇ ಗಿರಿಜಾಕಲ್ಯಾಣ ಎನ್ನುವರು.

ಪಾರ್ವತಿಯು ಪರ್ವತರಾಜನ ಪುತ್ರಿಯಾಗಿ ಅವತರಿಸಿ ಶಿವನನ್ನೇ ಮದುವೆಯಾಗಬೇಕೆಂದು ಹಿಮಾಚಲದಲ್ಲಿ ಉಗ್ರತಪಸ್ಸು ನಡೆಸಲು ಸಂಕಲ್ಪಿಸಿದ್ದಳು. ಆ ಸಮಯದಲ್ಲಿ ನಾರದ ಮಹರ್ಷಿಗಳು ಅಲ್ಲಿಗೆ ಆಗಮಿಸಲು, ಪರ್ವತರಾಜನು ಆತನನ್ನು ಸತ್ಕರಿಸಿ ನನ್ನಿಂದ ಏನು ಆಗಬೇಕೆಂದು ಬೇಡಿಕೊಂಡನು.

ಆಗ ನಾರದರು – ರಾಜನೇ, ನಿನ್ನ ಪುತ್ರಿ ಗಿರಿಜೆಗೆ ವಿವಾಹದ ವಯಸ್ಸು ಬಂದಿದೆ. ಯೋಗ್ಯನಾದ ಅಳಿಯನು ನಿನಗೆ ಬೇಕಲ್ಲವೇ ? ವಿಷ್ಣುವು ನಿನಗೆ ಯೋಗ್ಯ ಅಳಿಯನು. ಆತನಿಗೆ ನಿನ್ನ ಪುತ್ರಿಯನ್ನು ಕನ್ಯಾದಾನ ಮಾಡಿ ಕೃತಾರ್ಥನಾಗೆಂದು ತಿಳಿಸಲು, ಪರ್ವತರಾಜನು ಸಂತೋಷದಿಂದ ಒಪ್ಪಿದನು. ಇದಕ್ಕೆ ಮಹಾವಿಷ್ಣು ಕೂಡ ಒಪ್ಪಿದನು.

ಪರ್ವತರಾಜನು ತಾನು ನಾರದರೊಂದಿಗೆ ಚರ್ಚಿಸಿದ ಸಂಗತಿ – ಪಾರ್ವತಿಗೆ ತಿಳಿಸಲು, ಆಕೆಯು ತಂದೆಯೇ, ನಾನು ಪರಶಿವನ ಹೊರತು ಬೇರೆ ಯಾರನ್ನೂ ಮದುವೆ ಆಗುವುದಿಲ್ಲ ಎಂದು ತನ್ನ ಮನಸ್ಸಿನ ಸಂಕಲ್ಪ ತಿಳಿಸಿ, ತನ್ನ ಸಖಿಯೊಡಗೂಡಿ ಹಿಮಾಚಲದ ರಹಸ್ಯಸ್ಥಾನಕ್ಕೆ ತೆರಳಿ – ಶಿವನನ್ನೇ ಪತಿಯಾಗಿ ಪಡೆಯಲು ಏಕಾಗ್ರತೆಯಿಂದ ಉಗ್ರತಪಸ್ಸನ್ನು ಪ್ರಾರಂಭಿಸಿದಳು. ಅನೇಕ ದಿನಗಳು ಕಳೆಯಿತು. ಪಾರ್ವತಿ ತಪಸ್ಸನ್ನು ನಿಲ್ಲಿಸಲಿಲ್ಲ. ಮಗಳನ್ನು ಕಾಣದೆ ಪರ್ವತರಾಜ ದಂಪತಿಗಳು ದುಃಖಿತರಾದರು. ಪಾರ್ವತಿಯ ಉಗ್ರತಪಸ್ಸಿಗೆ ಇಂದ್ರಾದಿ ದೇವತೆಗಳು ಬೆದರಿ ಶಿವನ ಬಳಿಗೆ ಬಂದು ಆತನನ್ನು ಸ್ತುತಿಸುತ್ತಾ, ಹೇ ಪರಮೇಶ್ವರಾ, ಪರ್ವತರಾಜನ ಪುತ್ರಿಯಾದ ಪಾರ್ವತಿಯು, ನಿನ್ನನ್ನೇ ಪತಿಯನ್ನಾಗಿ ಪಡೆಯಲು, ಉಗ್ರತಪಸ್ಸನ್ನು ಆಚರಿಸುತ್ತಿದ್ದಾಳೆ. ಆಕೆಯಲ್ಲಿ ಕರುಣೆ ತೋರಿಸಿ– ಆಕೆಯ ಮನೋರಥ ಈಡೇರಿಸಬೇಕೆಂದು ಪ್ರಾರ್ಥಿಸಿದರು.



ದೇವತೆಗಳ ಮಾತಿಗೆ ಒಪ್ಪಿ, ಶಂಕರನು ಬ್ರಹ್ಮಚಾರಿ ವೇಷದಲ್ಲಿ ಪಾರ್ವತಿ ತಪಸ್ಸನ್ನಾಚರಿಸುತ್ತಿದ್ದ ಹಿಮಾಚಲಕ್ಕೆ ಆಗಮಿಸಿ, ಹೇ ಕನ್ಯೆಯೇ, ಏಕೆ ಘೋರ ತಪಸ್ಸೆಂದು ಕೇಳಲು;

ಪಾರ್ವತಿಯು, ಹೇ ಬ್ರಹ್ಮಚಾರಿಯೇ, ನನ್ನ ತಂದೆ ನನ್ನನ್ನು ವಿಷ್ಣುವಿಗೆ ಕೊಟ್ಟು ಮದುವೆ ಮಾಡಲು ನಿಶ್ಚಯಿಸಿರುವನು. ಆದರೆ ನಾನು ಪರಶಿವನ ಹೊರತು ಬೇರೆ ಯಾರನ್ನೂ ಮದುವೆ ಆಗಲಾರೆ. ಶಿವನನ್ನು ಪತಿಯಾಗಿ ಪಡೆಯಲೆಂದು ಈ ತಪಸ್ಸು ಆಚರಿಸುತ್ತಿರುವೆ ಎಂದಳು.

ಆ ಬ್ರಹ್ಮಚಾರಿಯು, ಹೇ–ಕನ್ಯೆಯೇ, ಶಿವನಿಗಿಂತ ವಿಷ್ಣುವು ಎಲ್ಲದರಲ್ಲೂ ಉತ್ತಮನು, ಆತನೇ ನಿನಗೆ ಸರಿಯಾದ ವರನು ಎನ್ನಲು, ಆ ಮಾತುಗಳಿಗೆ ಪಾರ್ವತಿ ಕೋಪಗೊಂಡು, ಹೇ ಬ್ರಹ್ಮಚಾರಿಯೇ, ಪರಶಿವನನ್ನು ಹಿಯ್ಯಾಳಿಸಬೇಡ, ಆತನೇ ನನಗೆ ಪತಿಯಾಗಲು ಯೋಗ್ಯ. ಆತನನ್ನೇ ವರಿಸುವೆ ಎಂದಳು.

ಬ್ರಹ್ಮಚಾರಿ ರೂಪದಲ್ಲಿದ್ದ ಶಿವನು, ಆಕೆಯ ಮಾತಿಗೆ ಮೆಚ್ಚಿ, ಆಕೆಯ ನಿರ್ಮಲ ಭಕ್ತಿ, ಪ್ರೇಮಕ್ಕೆ ಮನಸೋತು ತನ್ನ ನಿಜರೂಪ ತೋರಿಸಲು ಆಗ ಪಾರ್ವತಿ ಅತ್ಯಂತ ಭಕ್ತಿಯಿಂದ ಶಿವನನ್ನು ಅನೇಕ ವಿಧವಾಗಿ ಸ್ತುತಿಸಿ – ತನ್ನನ್ನು ಸ್ವೀಕರಿಸಿ ಕೃತಾರ್ಥಳನ್ನಾಗಿ ಮಾಡಬೇಕೆನ್ನಲು, ಅದಕ್ಕೆ ಪರಶಿವನು, ಹೇ ಭಕ್ತಳೇ, ಅದಕ್ಕೆ ಇದು ಸಮಯವಲ್ಲ. ಈಗ ನೀನು ನಿನ್ನ ತಂದೆಯ ಮನೆಗೆ ಹೋಗು. ಅಲ್ಲಿ ದೃಢಭಕ್ತಿಯಿಂದ – ಹದಿನಾರು ಸೋಮವಾರಗಳ ವ್ರತ ಆಚರಿಸು, ಖಂಡಿತ ನಿನ್ನ ಮನದಾಸೆ ನೆರವೇರುತ್ತದೆ ಎಂದು ಆಶ್ವಾಸನೆ ನೀಡಿದನು.

ಪಾರ್ವತಿಯು – ಶಿವನಿಂದ ಹದಿನಾರು ಸೋಮವಾರ ವ್ರತದ ವಿಧಾನ ಸಮಗ್ರವಾಗಿ ತಿಳಿದು – ಮನೆಗೆ ಹಿಂದಿರುಗಿ ಶ್ರದ್ಧೆಯಿಂದ ವ್ರತವನ್ನು ಸಾಂಗವಾಗಿ ಆಚರಿಸಿದಳು. ಈ ವ್ರತ ಆಚರಣೆ ಮಹಿಮೆಯಿಂದ, ಪರ್ವತರಾಜನು ಸುಪ್ರೀತನಾಗಿ ವಾತ್ಸಲ್ಯದಿಂದ ಪಾರ್ವತಿಯನ್ನು ಸಂತೈಸಿ ಆಕೆಯ ಮದುವೆಯನ್ನು ಶಿವನೊಂದಿಗೆ

ನಡೆಸಲು ಒಪ್ಪಿ ಅದಕ್ಕೆ ಬೇಕಾದ ಎಲ್ಲ ಸಿದ್ಧತೆಗಳನ್ನು ನಡೆಸಿ, ಶಿವನನ್ನು ಭಕ್ತಿಯಿಂದ ಯಾಚಿಸಿ ಆತನೊಡನೆ, ತನ್ನ ಮಗಳ ಮದುವೆಯನ್ನು ನಡೆಸಿದನು. ಇದನ್ನೇ 'ಗಿರಿಜಾ ಕಲ್ಯಾಣ' ವೆನ್ನುತ್ತಾರೆ.

ಎರಡನೆಯ ಅಧ್ಯಾಯ ಮುಗಿಯಿತು

## ಮೂರನೆಯ ಅಧ್ಯಾಯ

ಹದಿನಾರು ಸೋಮವಾರ ವ್ರತ ಆಚರಿಸಿ ಅನೇಕ ಮಹನೀಯರು ಅನೇಕ ಫಲಗಳನ್ನು ಪಡೆದಿರುವುದನ್ನು ನಾವು ಪುರಾಣಗಳಲ್ಲಿ ತಿಳಿಯುತ್ತೇವೆ.

ಈ ವ್ರತದ ಮಹಿಮೆ ಅಪಾರವಾದದ್ದು.

ಒಮ್ಮೆ ಷಣ್ಮುಖನು ಕೋಪದಿಂದ ಕೈಲಾಸದಿಂದ ಹೊರಟುಹೋದನು. ಆಗ ಪಾರ್ವತಿ ಈ ವ್ರತವನ್ನು ಆಚರಿಸಲು, ಷಣ್ಮುಖನು ಕೋಪತೊರೆದು ತಾಯಿಯ ಬಳಿಗೆ ಹಿಂದಿರುಗಿದನು.

ಚಿತ್ರವರ್ಮನೆಂಬ ರಾಜನು ಹಿಂದೆ ಭರತಖಂಡ ಆಳುತ್ತಿದ್ದನು. ಆತನಿಗೆ ಗಂಡು ಸಂತಾನವಿದ್ದರೂ, ಹೆಣ್ಣು ಮಗುವನ್ನು ಪಡೆಯಬೇಕೆಂದು ಇಚ್ಛಿಸಿ ಆಸ್ಥಾನದಲ್ಲಿದ್ದ ಗುರು ಹಿರಿಯರ ಸಲಹೆಯಂತೆ ಹದಿನಾರು ಸೋಮವಾರ ವ್ರತವನ್ನು ತನ್ನ ಪತ್ನಿಯೊಂದಿಗೆ ಆಚರಿಸಿ ಹೆಣ್ಣುಮಗುವನ್ನು ಪಡೆದನು. ಆ ಮಗುವಿಗೆ ಸೀಮಂತಿನಿ ಎಂದು ಹೆಸರಿಟ್ಟನು.

ವ್ರತದ ಪ್ರಭಾವದಿಂದ ಪಡೆದಿದ್ದ ಈ ಶಿಶುವಿಗೆ ಜಾತಕದಲ್ಲಿ ಹದಿನಾರನೇ ವಯಸ್ಸಿನಲ್ಲಿ ವೈಧವ್ಯ ಪ್ರಾಪ್ತಿ ಎಂದಿತ್ತು, ರಾಜನು ದುಃಖಿತನಾಗಲು, ಆಪ್ತರು ಈ ಕಷ್ಟನಿವಾರಣೆ ಶಿವನ ಕೃಪೆಯಿಂದ ಮಾತ್ರ ಸಾಧ್ಯ ಎಂದು ತಿಳಿಸಿದರು.

ರಾಜನು ತನ್ನ ಪುತ್ರಿಗೆ ಸಕಲ ವಿದ್ಯೆಗಳನ್ನು ಕಲಿಸಿದನು. ಸೀಮಂತಿನಿ ಸುಂದರ ಕನ್ಯೆಯಾಗಿ ವಿಜೃಂಭಿಸುತ್ತಿದ್ದಳು.



ನಿಷಧ ರಾಜಕುಮಾರನಾದ ಚಂದ್ರಾಂಗದನೊಡನೆ ತನ್ನ ಪುತ್ರಿಯ ಮದುವೆ ನಡೆಸಿದನು. ತನ್ನ ಮಗಳಿಗೆ ಹದಿನಾರನೇ ವಯಸ್ಸಿನಲ್ಲಿ ಒದಗಬಹುದಾದ ವೈಧವ್ಯದ ಬಗ್ಗೆ ತಿಳಿಸಲಿಲ್ಲ.

ನೂತನ ದಂಪತಿಗಳು ಕೆಲವು ಕಾಲ ಆನಂದದಿಂದ ಕಾಲಕಳೆದರು. ಈ ಆನಂದ ಹೆಚ್ಚುಕಾಲ ಉಳಿಯಲಿಲ್ಲ. ಒಮ್ಮೆ ಚಂದ್ರಾಂಗದನು ತನ್ನ ಸ್ನೇಹಿತರೊಡನೆ ಯಮುನಾ ನದೀ ತೀರದಲ್ಲಿ ವಿಹರಿಸುತ್ತಾ ನದಿಯಲ್ಲಿ ಮುಳುಗಿಹೋದನು. ಗೆಳೆಯರಿಗೆ ಆತನನ್ನು ಕಾಪಾಡಲು ಆಗಲಿಲ್ಲ. ರಾಜಕುಮಾರನ ಶವವೂ ದೊರೆಯಲಿಲ್ಲ. ಸಂಗತಿ ತಿಳಿದ ರಾಜನು ದುಃಖತಪ್ತನಾದನು. ಸೀಮಂತಿನಿ ತನ್ನ ಪತಿಯ ನಿಧನದ ಸಂಗತಿ ಕೇಳಿ ಮೂರ್ಛಿತಳಾದಳು.

ಎಚ್ಚರಗೊಂಡ ಸೀಮಂತಿನಿ ತಾನೂ ಸಾಯುವ ನಿರ್ಧಾರ ಕೈಗೊಂಡಳು. ತಂದೆ-ತಾಯಿಯರು ಎಷ್ಟು ಸಮಾಧಾನ ಮಾಡಿದರೂ ಆಕೆ ತನ್ನ ನಿರ್ಧಾರ ಬದಲಿಸಲಿಲ್ಲ.

ಆಗ, ಅಲ್ಲಿಗೆ ಯಾಜ್ಞವಲ್ಕ್ಯ ಮುನಿಗಳು ಪತ್ನಿಯೊಡನೆ ದೈವ ಪ್ರೇರಣೆ ಎಂಬಂತೆ ಆಗಮಿಸಿ, ಸೀಮಂತಿನಿಯನ್ನು ಸಂತೈಸಿ, ಮಗೂ, ನೀನು ಶ್ರದ್ಧೆಯಿಂದ, ಹದಿನಾರು ಸೋಮವಾರ ವ್ರತ ಆಚರಿಸಿದಲ್ಲಿ, ನಿನ್ನ ಪತಿ ನಿನಗೆ ದೊರತು ಸೌಭಾಗ್ಯ ಮರಳಿ ಪಡೆಯುವೆ. ಇದು ಸತ್ಯ ಎಂದು ನುಡಿದು - ಆಕೆಗೆ ವ್ರತವಿಧಾನ ತಿಳಿಸಿದರು.

ಸೀಮಂತಿನಿ ಋಷಿ-ಪತ್ನಿಯ ಮಾತನ್ನು ನಂಬಿ ಆಕೆ ತಿಳಿಸಿದಂತೆ ಹದಿನಾರು ಸೋಮವಾರ ವ್ರತವನ್ನು ಆಚರಿಸತೊಡಗಿದಳು. ವ್ರತಾಚರಣೆಯ ಪ್ರಭಾವದಿಂದ ನದಿಯಲ್ಲಿ ಸುಳಿಗೆ ಸಿಕ್ಕಿದ್ದ ಚಂದ್ರಾಂಗದನು ಪಾತಾಳಲೋಕ ತಲುಪಿದ್ದನು. ಅಲ್ಲಿ ನಾಗಕನ್ಯೆಯರು ಆತನನ್ನು ತಮ್ಮ ರಾಜ ತಕ್ಷಕನ ಬಳಗೆ ಕರೆದೊಯ್ದರು. ಆತನ ಸಂಗತಿ ತಿಳಿದ ತಕ್ಷಕರಾಜನು ರಾಜಕುಮಾರನನ್ನು ತನ್ನ ಅತಿಥಿಯಾಗಿ ಉಪಚರಿಸಿ ಅಲ್ಲಿಯೇ ಇರಿಸಕೊಂಡನು.

ಸ್ವಲ್ಪಕಾಲದ ನಂತರ ಚಂದ್ರಾಂಗದನಿಗೆ ತನ್ನ ಪತ್ನಿ ಸೀಮಂತಿನಿಯ ನೆನಪಾಯಿತು. ಸೀಮಂತಿನಿಯ ವ್ರತಾಚರಣೆ ಫಲವಾಗಿ ನಾಗರಾಜನಿಗೆ ಚಂದ್ರಾಂಗದನನ್ನು ಆತನ ಪತ್ನಿಯ ಬಳಿಗೆ ಮರಳಿ ಕಳುಹಿಸುವ ಮನಸ್ಸಾಯಿತು. ಯೋಗ್ಯ ಬಹುಮಾನಗಳೊಂದಿಗೆ ಕುದುರೆಯನ್ನು ನೀಡಿ ಸೇವಕರೊಂದಿಗೆ ಭೂಲೋಕಕ್ಕೆ ಕಳಿಸಿದನು.

ಇತ್ತ ಸೀಮಂತಿನಿ ಸಾಂಗವಾಗಿ ವ್ರತ ಆಚರಿಸಿ ಕೊನೆಯಲ್ಲಿ ಶಿವಲಿಂಗ ವಿಸರ್ಜನೆಗಾಗಿ ಯಮುನಾ ನದಿ ತೀರಕ್ಕೆ ಆಗಮಿಸಿದ್ದಳು. ಆ ಸಮಯದಲ್ಲಿ ಚಂದ್ರಾಂಗದನು ಸೇವಕರೊಡನೆ ನಾಗರಾಜನು ನೀಡಿದ್ದ ಕುದುರೆಯ ಮೇಲೇರಿ ಅಲ್ಲಿಗೆ ಬರಲು, ಆತನನ್ನು ಕಂಡ ಸೀಮಂತಿನಿ ಆನಂದದಿಂದ ಆತನ ಪಾದಗಳಿಗೆರಗಿ ಆತನೊಂದಿಗೆ ಅರಮನೆಗೆ ಬಂದಳು.

ಎಲ್ಲರೂ ಸಂತೋಷಗೊಂಡರು. ಹದಿನಾರು ಸೋಮವಾರ ವ್ರತ ಮಹಿಮೆಯನ್ನು ಎಲ್ಲರೂ ಕೊಂಡಾಡಿದರು. ಈ ರಾಜದಂಪತಿಗಳು ತಮ್ಮ ಜೀವಮಾನಕಾಲದಲ್ಲಿ ಈ ವ್ರತವನ್ನು ಮತ್ತೆ ಮತ್ತೆ ಆಚರಿಸಿ, ಕೊನೆಗೆ ಪರಶಿವನ ಲೋಕ ಸೇರಿದರು.

ಮೂರನೆಯ ಅಧ್ಯಾಯ ಮುಗಿಯಿತು

## ನಾಲ್ಕನೆಯ ಅಧ್ಯಾಯ

ಈ ವ್ರತದ ಆಚರಣೆಯಿಂದ ದೊರೆತ ಫಲದ ಬಗ್ಗೆ ಮತ್ತೊಂದು ಇತಿಹಾಸವನ್ನು ಸೂತರು – ನೆರೆದಿದ್ದ ಋಷಿ ಸಮೂಹಕ್ಕೆ ತಿಳಿಸುತ್ತಾರೆ.

ಹಿಂದೆ – ವಿದರ್ಭರಾಜ್ಯದಲ್ಲಿ ದೇವಮಿತ್ರ ಮತ್ತು ಸಾರಸ್ವತ ಎಂಬ ಇಬ್ಬರು ಸ್ನೇಹಿತರಿದ್ದರು. ದೇವಮಿತ್ರನ ಮಗ ಸುಮೇಧ ಹಾಗೂ ಸಾರಸ್ವತನ ಮಗ ಸುಮಂತ ಬಾಲ್ಯ ಸ್ನೇಹಿತರು. ಇವರು ಒಟ್ಟಿಗೆ ವಿದ್ಯಾಭ್ಯಾಸ ಮುಗಿಸಿ, ತಮ್ಮ ರಾಜನ ಬಳಿಗೆ ಬಂದು ಹಣದ ಸಹಾಯ ಕೇಳಿದರು.



ಆಗ ರಾಜನು, ನಾನು ಹೇಳುವ ಒಂದು ಕಾರ್ಯ ಯಶಸ್ವಿಯಾಗಿ ನೀವು ನಡೆಸಿಕೊಟ್ಟಲ್ಲಿ ನಿಮಗೆ ಹೆಚ್ಚಿನ ಹಣ ಕೊಡುತ್ತೇನೆ. ಅದೇನೆಂದರೆ, ನೀವಿಬ್ಬರು ಸ್ನೇಹಿತರು ಪತಿ–ಪತ್ನಿಯರಂತೆ ವೇಷಧರಿಸಿ ಚಂದ್ರಾಂಗದನ ಪತ್ನಿ ಸೀಮಂತಿನಿಯಿಂದ ಹಣ ಪಡೆದು ಬಂದಲ್ಲಿ ನಿಮಗೆ ನಾನು ಸಕಲ ಸಂಪತ್ತನ್ನೂ ಕೊಡುತ್ತೇನೆ ಎಂದನು.

ಆ ಯುವಕರು, ರಾಜನೇ ನಾವು ಮಾರುವೇಷದಿಂದ ಮೋಸವಾಗಿ ಹಣ ಸಂಪಾದಿಸುವುದು ಸರಿಯಲ್ಲ, ಈ ತಂತ್ರ ನಮಗೆ ಇಷ್ಟವಿಲ್ಲವೆನ್ನಲು, ರಾಜನು ಕೋಪದಿಂದ ನಮ್ಮ ಮಾತನ್ನು ಮೀರಿದರೆ ಉಗ್ರ ಶಿಕ್ಷೆ ವಿಧಿಸುತ್ತೇನೆ ಎಚ್ಚರ ಎನ್ನಲು, ರಾಜನ ಕೋಪ ಪ್ರವೃತ್ತಿಯಿಂದ ಭಯಗೊಂಡ ಯುವಕರು, ಬೇರೆ ಮಾರ್ಗವಿಲ್ಲದೆ ರಾಜನ ಆಜ್ಞೆಯಂತೆ ಸತಿಪತಿಗಳ ರೂಪದಲ್ಲಿ ಸೀಮಂತಿನಿಯ ಅರಮನೆ ಪ್ರವೇಶಿದರು.

ಸೀಮಂತಿನಿಯು ಪತಿ–ಪತ್ನಿಯರ ರೂಪದಲ್ಲಿ ಬಂದ ಯುವಕರ ಕಪಟವನ್ನು ತನ್ನ ಪಾತಿವ್ರತ್ಯ ಮಹಿಮೆಯಿಂದ ತಿಳಿದು ಆ ದಂಪತಿಗಳನ್ನು ಸತ್ಕರಿಸಿ ಹೇರಳ ಧನ ಸಹಾಯ ಮಾಡಿದಳು. ಸೀಮಂತಿನಿಯಿಂದ ಹಣ ಪಡೆದ ಆ ಯುವಕರು ವಿದರ್ಭರಾಜನ ಬಳಿಗೆ ಹಿಂದಿರುಗಿದರು.

ಮಾರ್ಗದಲ್ಲಿ ಸುಮಂತನಿಗೆ ತಾನು ಧರಿಸಿದ್ದ ಹೆಣ್ಣುವೇಷ ನಿಜವಾಗಿ, ತಾನು ಸ್ತ್ರೀ ಆಗಿರುವುದನ್ನು ತಿಳಿದು ಭಯಭೀತನಾದನು. ಆತನು ಸುಮೇಧನನ್ನು ರತಿಕ್ರೀಡೆಗೆ ಆಹ್ವಾನಿಸಲು, ಸುಮೇಧನು ಆಶ್ಚರ್ಯದಿಂದ ಎಲೈ ಸುಮಂತನೇ, ನೀನು ಏನು ಹೇಳುತ್ತಿರುವೆ ? ನೀನು ಸ್ತ್ರೀ ವೇಷಧಾರಿಯಷ್ಟೇ, ಆದರೆ ನಿಜವಾಗಿ ಸ್ತ್ರೀ ಅಲ್ಲ ಎಂದು ಎಚ್ಚರಿಸಲು, ಅದಕ್ಕೆ ಸುಮಂತನು, ತಾನು ಈಗ ನಿಜವಾದ ಸ್ತ್ರೀ ಆಗಿರುವುದಾಗಿ ತಿಳಿಸಿ, ಸುಮೇಧನನ್ನು ಆಲಂಗಿಸಿಕೊಂಡಳು. ಸುಮೇಧನಿಗೆ ದಿಕ್ಕೇ ತೋಚಲಿಲ್ಲ, ಇಬ್ಬರೂ ತಮ್ಮ ಸ್ಥಳ ತಲುಪಿದರು.

ಸುಮಂತನ ತಂದೆಗೆ ತನ್ನ ಪುತ್ರನು ಹೆಣ್ಣಾಗಿ ಪರಿವರ್ತನೆ ಆಗಿದ್ದು ತಿಳಿದು ದುಃಖಿಸುತ್ತಾ, ಇದಕ್ಕೆ ಕಾರಣನಾದ ವಿದರ್ಭರಾಜನನ್ನು ಮನಸ್ಸಿನಲ್ಲೇ ದೂಷಿಸಿದನು.

ಸುಮಂತನ ತಂದೆ ಸಾರಸ್ವತನಿಗೆ ದಿಕ್ಕು ತೋರದೆ ಆಸ್ಥಾನ ಪುರೋಹಿತರು ಹಾಗೂ ಇತರೇ ವಿದ್ವಾಂಸರುಗಳನ್ನು ವಿಚಾರಿಸಲು, ಅವರು ಶಿವಭಕ್ತರಿಗೆ ಸುಳ್ಳು ಹೇಳಿ ನಾಟಕ ಆಡಿದ್ದರ ಫಲ ಇದಾಗಿದೆ. ಸೀಮಂತಿನಿಯಂತೆ ನೀನೂ ಅತಿ ಪುಣ್ಯಕರವಾದ ಹದಿನಾರು ಸೋಮವಾರ ವ್ರತ ಭಕ್ತಿಯಿಂದ ಆಚರಿಸಿದರೆ, ಶಿವನಕೃಪೆ ದೊರೆತು ಈ ಸಂಕಟ ನಿವಾರಣೆ ಆಗುತ್ತದೆಂದು ಬುದ್ಧಿವಾದ ಹೇಳಿದರು.

ಅದರಂತೆ ಸಾರಸ್ವತನು ಹದಿನಾರು ಸೋಮವಾರ ವ್ರತ ಆಚರಿಸಲು, ಪರಮೇಶ್ವರನು ಆತನ ಶ್ರದ್ಧಾ-ಭಕ್ತಿಗಳಿಗೆ ಪ್ರಸನ್ನನಾಗಲು, ಸಾರಸ್ವತನು ತನ್ನ ಮಗನಿಗೆ ಒದಗಿ ಬಂದ ಕಷ್ಟನಿವಾರಣೆ ಮಾಡೆಂದು ಶಿವನಲ್ಲಿ ಪ್ರಾರ್ಥಿಸಲು, ಆಗ ಶಿವನು, ಎಲೈ ಸಾರಸ್ವತನೇ, ನನ್ನ ಭಕ್ತರ ಮಾತು ನಾನು ಮೀರಲಾರೆ, ಆಗಿದ್ದಾಯಿತು. ನಿನಗೆ ಇನ್ನೊಬ್ಬ ಪುತ್ರನನ್ನು ಕರುಣಿಸುವೆ, ಈಗ ಈ ಸುಮಂತ ಸುಮೇಧರಿಗೆ ವಿವಾಹ ನೆರವೇರಿಸಿರಿ ಎಂದು ನುಡಿದು - ಅಂತರ್ಧಾನ ನಾದನು. ಶಿವನ ಮಾತಿನಂತೆ ಸುಮಂತ ಸುಮೇಧರಿಗೆ ವಿವಾಹ ನಡೆಯಿತು. ಶಿವನ ಕರುಣೆಯಿಂದ ಸಾರಸ್ವತನಿಗೆ ಇನ್ನೊಬ್ಬ ಪುತ್ರನು ಜನಿಸಿದನು.

ನಾಲ್ಕನೆಯ ಅಧ್ಯಾಯ ಮುಗಿಯಿತು

## ಐದನೆಯ ಅಧ್ಯಾಯ

ಈ ವ್ರತದ ಪ್ರಭಾವದ ಬಗ್ಗೆ - ಇನ್ನೊಂದು ಇತಿಹಾಸವನ್ನು ಸೂತರು ಋಷಿಗಳಿಗೆ ಈ ರೀತಿ ನಿರೂಪಿಸಿದರು.



ಪೂರ್ವಕಾಲದಲ್ಲಿ ಮಹಾತಪಸ್ವಿಯಾದ ಮೃಕಂಡು ಋಷಿ, ತನಗೆ ಪುತ್ರ ಸಂತಾನ ಇಲ್ಲದೆ ಕೊರಗುತ್ತಿದ್ದನು. ಆತನ ಪತ್ನಿ ಮೃಕಂಡುವನ್ನು ಇನ್ನೊಂದು ಮದುವೆ ಆಗಲು ಒತ್ತಾಯಿಸುತ್ತಿದ್ದಳು. ಏಕಪತ್ನೀ ವ್ರತಸ್ಥನಾದ ಮೃಕಂಡು ಇದಕ್ಕೆ ಒಪ್ಪದೆ ಶಿವನನ್ನು ಕುರಿತು ತಪಸ್ಸನ್ನಾಚರಿಸಿದನು. ಈತನ ತಪಸ್ಸಿಗೆ ಮೆಚ್ಚಿದ ಪರಮೇಶ್ವರನನ್ನು ಮೃಕಂಡು ತನಗೆ ಸಂತಾನ ಭಾಗ್ಯ ಕರುಣಿಸೆಂದು ಪ್ರಾರ್ಥಿಸಿದನು.

ಆಗ ಶಿವನು, ಎಲೈ ಮೃಕಂಡುವೇ, ನಿನಗೆ ದೀರ್ಘ ಆಯುಸ್ಸಿನ ಅಯೋಗ್ಯ ಪುತ್ರನು ಬೇಕೋ ಅಥವಾ ಕೇವಲ ಹದಿನಾರು ವರ್ಷ ಆಯುಸ್ಸುಳ್ಳ ಉತ್ತಮ ಪುತ್ರನು ಬೇಕೋ ಎನ್ನಲು, ಮೃಕಂಡುವು ಕ್ಷಣಕಾಲ ಯೋಚಿಸಿ ಅಲ್ಪ ಆಯುಸ್ಸುಳ್ಳ ಉತ್ತಮ ಪುತ್ರನನ್ನೇ ಬೇಡಿದನು.

ಶಂಕರನು ಸುಪ್ರೀತನಾಗಿ 'ತಥಾಸ್ತು' ಎನ್ನುತ್ತಾ ಅಂತರ್ಧಾನ ನಾದನು.

ಶಿವನ ಕರುಣೆಯಿಂದ ಮೃಕಂಡು ದಂಪತಿಗಳಿಗೆ ಪುತ್ರಸಂತಾನ ಪ್ರಾಪ್ತಿಯಾಯಿತು. ಶಿಶುವಿಗೆ ಮಾರ್ಕಂಡೇಯ ಎಂದು ನಾಮಕರಣ ಮಾಡಿದರು. ಮಾರ್ಕಂಡೇಯನು, ವಿದ್ಯಾಸಂಪನ್ನನಾಗಿ ಶಿವಭಕ್ತನಾಗಿ ಬೆಳೆಯುತ್ತಾ, ಹದಿನಾರು ವರ್ಷ ಕಳೆಯಲು, ಆಗ ಮೃಕಂಡುವು ತನ್ನ ಪುತ್ರನಿಗೆ ಆಯುಷ್ಯಪ್ರದ ಹದಿನಾರು ಸೋಮವಾರ ವ್ರತದ ಪೂಜಾವಿಧಾನ ಉಪದೇಶಿಸಲು, ಮಾರ್ಕಂಡೇಯನು ಆ ವ್ರತವನ್ನು ಭಕ್ತಿಯಿಂದ ಆಚರಿಸಿದನು.

ಈ ವ್ರತಾಚಾರಣೆ ಪ್ರಭಾವದಿಂದ, ಆಯುಷ್ಯ ಮುಗಿದ ಮಾರ್ಕಂಡೇಯನ ಪ್ರಾಣ ತೆಗೆಯಲು ಬಂದಂತ ಯಮಭಟರು ಮೃತ್ಯುಪಾಶ ಬೀರಿದರು. ಶಿವಲಿಂಗ ಅಪ್ಪಿ ಶಿವನನ್ನು ಸ್ತುತಿಸುತ್ತಿದ್ದ - ಮಾರ್ಕಂಡೇಯನನ್ನು ಆ ಪಾಶ ಬಂಧಿಸಲಾಗದೆ ಮಾಯವಾಯಿತು. ಮಾರ್ಕಂಡೇಯನ ಮೃತ್ಯು ಪರಿಹಾರವಾಗಿ ಚಿರಂಜೀವಿ ಆದನು.

ಐದನೆಯ ಅಧ್ಯಾಯ ಮುಗಿಯಿತು.

## ಆರನೆಯ ಅಧ್ಯಾಯ

ದ್ವಾಪರಯುಗದಲ್ಲಿ ಶ್ರೀಕೃಷ್ಣನು ಜಾಂಬವಂತನ ಪುತ್ರಿ ಜಾಂಬವತಿಯನ್ನು ವಿವಾಹ ಆಗಿದ್ದನು. ಕಾಲಕ್ರಮದಲ್ಲಿ ಜಾಂಬವತಿ ಸಂತಾನ ಪಡೆಯದೆ ಚಿಂತಿಸುತ್ತಾ ತನ್ನ ದುಃಖವನ್ನು ಪತಿ–ಶ್ರೀಕೃಷ್ಣನಲ್ಲಿ ಹೇಳಲು, ಸಾಕ್ಷಾತ್ ಭಗವಂತನಾದ ಶ್ರೀಕೃಷ್ಣನು, ಎಲೈ ಜಾಂಬವತೀ, ನೀನು ಅನನ್ಯ ಭಕ್ತಿಯಿಂದ ಶಿವನಿಗೆ ಅತಿ ಪ್ರೀತಿಯಾದ ಹದಿನಾರು ಸೋಮವಾರವ್ರತ ವನ್ನು ಆಚರಿಸು, ಇದನ್ನು ಉಪಮನ್ಯು ಮಹರ್ಷಿ ನನಗೆ ಉಪದೇಶಿಸಿರುವನು. ಈಗ ನಿನಗೆ ತಿಳಿಸಿರುವೆನೆನ್ನಲು;

ಆದರಂತೆ ಜಾಂಬವತಿ ವ್ರತವನ್ನಾಚರಿಸಿ – ಸಾಂಬನೆಂಬ ಪುತ್ರನನ್ನು ಪಡೆದಳು.

ಶ್ರೀಕೃಷ್ಣ ಜಾಂಬವತೀ ದಂಪತಿಗಳು, ಈ ವ್ರತವನ್ನು ದ್ವಾರಕಾ ಪ್ರಜೆಗಳಿಗೆ ಉಪದೇಶಿಸಿ, ಎಲ್ಲರೂ ಆಚರಿಸಿ ತಮ್ಮ–ತಮ್ಮ ಇಚ್ಛೆಗಳನ್ನು ಪೂರೈಸಿಕೊಳ್ಳಬಹುದೆಂದರು. ಅದರಂತೆ ದ್ವಾರಕಾ ಪ್ರಜೆಗಳು ಈ ಶುಭದಾಯಕ ವ್ರತವನ್ನಾಚರಿಸಿ ಸುಖ, ಶಾಂತಿ, ಸಂತಾನ, ಐಶ್ವರ್ಯಗಳನ್ನು ಪಡೆದರು.

ಆರನೆಯ ಅಧ್ಯಾಯ ಮುಗಿಯಿತು

## ಏಳನೆಯ ಅಧ್ಯಾಯ

ಮತ್ತೆ ಸೂತರು, ದಾರಿದ್ರ್ಯದಿಂದ ನರಳುತ್ತಿದ್ದ ಒಬ್ಬ ಬ್ರಾಹ್ಮಣನು ಶ್ರೀ ಕೃಷ್ಣನ ಉಪದೇಶದಂತೆ ಈ ವ್ರತಾಚರಣೆ ಮಾಡಿ ದಾರಿದ್ರ್ಯ ನಿವಾರಣೆ ಪಡೆದದ್ದನ್ನು ಋಷಿಗಳಿಗೆ ತಿಳಿಸಿದರು.

ದ್ವಾಪರಯುಗದಲ್ಲಿ, ದ್ವಾರಕೆಯಲ್ಲಿ ತುಂಬಾ ಬಡತನದಿಂದ ಬಳಲುತ್ತಿದ್ದ ಬ್ರಾಹ್ಮಣನೊಬ್ಬನು, ಶ್ರೀಕೃಷ್ಣನಲ್ಲಿ ತನ್ನ ಕಷ್ಟ ಹೇಳಿಕೊಂಡು ಈ ದಾರಿದ್ರ್ಯ ನಿವಾರಣೆಗೆ ಉಪಾಯವೇನೆಂದು ಕೇಳಲು, ಆಗ



ಶ್ರೀ ಕೃಷ್ಣನು ಆತನಿಗೆ 'ಹದಿನಾರು ಸೋಮವಾರ ವ್ರತ' ಆಚರಿಸಲು ತಿಳಿಸಿದನು. ಶ್ರೀಕೃಷ್ಣನಿಂದ ಉಪದೇಶಿಸಲ್ಪಟ್ಟ ವ್ರತವನ್ನು ಆಚರಿಸಿ, ಶಂಕರನಲ್ಲಿ ತನ್ನ ದಾರಿದ್ರ್ಯ ನಿವಾರಣೆ ಆಗಿ ಸಂಪತ್ತು ಹಾಗೂ ಉತ್ತಮ ಹೆಂಡತಿ ಬೇಕೆಂದು ಪ್ರಾರ್ಥಿಸುತ್ತಾ, ಅಲ್ಲಲ್ಲಿ ಸಂಚಾರ ಮಾಡುತ್ತಾ ತನ್ನ ರಾಜ್ಯದ ರಾಜಧಾನಿ ತಲುಪಿದನು.

ಆ ಸಮಯದಲ್ಲಿ, ಆ ರಾಜ್ಯದ ರಾಜನು ತನ್ನ ಪುತ್ರಿಗೆ ಸ್ವಯಂವರ ನಡೆಸಲು ನಿಶ್ಚಯಿಸಿ, ಪಟ್ಟದ ಆನೆಯ ಸೊಂಡಲಿಗೆ ಹೂಮಾಲೆಕೊಟ್ಟು ಆನೆ ಯಾರ ಕೊರಳಿಗೆ ಹೂಮಾಲೆ ಹಾಕುವುದೋ ಆತನೇ ತನ್ನ ಅಳಿಯನೆಂದು ಡಂಗೂರ ಸಾರಿದ್ದನು.

ಆನೆ ಊರನ್ನು ಸುತ್ತುತ್ತಾ ಜನರ ಗುಂಪಿನಲ್ಲಿದ್ದ ಬ್ರಾಹ್ಮಣ ಯುವಕನ ಕೊರಳಿಗೆ ಹೂಮಾಲೆ ಹಾಕಿತು. ರಾಜನು ತನ್ನ ಘೋಷಣೆಯಂತೆ ತನ್ನ ಮಗಳನ್ನೆ ಆ ಬ್ರಾಹ್ಮಣ ಯುವಕನಿಗೆ ಕೊಟ್ಟು ಮದುವೆ ನಡೆಸಿ ತನಗೆ ಪುತ್ರನಿಲ್ಲದ್ದರಿಂದ ಅಳಿಯನಿಗೆ ಪಟ್ಟಾಭಿಷೇಕ ಮಾಡಿ ವಾನಪ್ರಸ್ತಾಶ್ರಮಕ್ಕೆ ಹೊರಟನು. ರಾಜಕುಮಾರಿ ತನಗೆ ಪತಿಯಾದ ಬ್ರಾಹ್ಮಣ ಯುವಕನನ್ನು ಕುರಿತು, ಬಡಬ್ರಾಹ್ಮಣನಾದ ನಿಮಗೆ ಈ ಸಂಪತ್ತು, ರಾಜ್ಯ, ದೊರೆಯಲು ಏನು ಕಾರಣವೆಂದು ಕೇಳಲು, ಆ ಬ್ರಾಹ್ಮಣ ಯುವಕನು, ತಾನು ಶ್ರೀ ಕೃಷ್ಣನಿಂದ ಉಪದೇಶಿಸಲ್ಪಟ್ಟ ಸಕಲ ಸಂಪತ್ಪ್ರದಾಯಕ ಹದಿನಾರು ಸೋಮವಾರ ವ್ರತ ಆಚರಿಸಿ ಇಷ್ಟೆಲ್ಲಾ ವೈಭವ ಪಡೆದುದನ್ನು ತಿಳಿಸಿದನು.

ಆ ದಂಪತಿಗಳು ತಾವು ಈ ವ್ರತವನ್ನು ಸದಾ ಆಚರಿಸುತ್ತಾ ತಮ್ಮ ಪ್ರಜೆಗಳಿಗೂ ಬೋಧಿಸಿ, ಧರ್ಮದಿಂದ ಅನೇಕಕಾಲ ರಾಜ್ಯ ಆಳುತ್ತಾ ಕೊನೆಯಲ್ಲಿ ಶಿವಲೋಕ ಸೇರಿದರೆಂದು ಸೂತರು ಋಷಿಗಳಿಗೆ ತಿಳಿಸಿ ಈ ಲೋಕದಲ್ಲಿ ಎಲ್ಲರೂ ಈ ವ್ರತವನ್ನು ಶ್ರದ್ಧಾ ಭಕ್ತಿಗಳಿಂದ ಆಚರಿಸಲು ತಿಳಿಸಿದರು.

ಏಳನೆಯ ಅಧ್ಯಾಯ ಮುಗಿಯಿತು

॥ ಹದಿನಾರು ಸೋಮವಾರ ವ್ರತಕಥಾರ್ಥವು ಸಂಪೂರ್ಣವು ॥

# ಶ್ರೀ ಶಿವಾಷ್ಟೋತ್ತರ ಶತನಾಮಾವಳಿಃ

ಓಂ ಶಿವಾಯ ನಮಃ
ಓಂ ಮಹೇಶ್ವರಾಯ ನಮಃ
ಓಂ ಶಂಭವೇ ನಮಃ
ಓಂ ಪಿನಾಕಿನೇ ನಮಃ
ಓಂ ಶಶಿಖೇಖರಾಯ ನಮಃ
ಓಂ ವಾಮದೇವಾಯ ನಮಃ
ಓಂ ವಿರೂಪಾಕ್ಷಾಯ ನಮಃ
ಓಂ ಕಪರ್ದಿನೇ ನಮಃ
ಓಂ ನೀಲಲೋಹಿತಾಯ ನಮಃ
ಓಂ ಶಂಕರಾಯ ನಮಃ 10

ಓಂ ಶೂಲಪಾಣಯೇ ನಮಃ
ಓಂ ಖಟ್ವಾಂಗಿನೇ ನಮಃ
ಓಂ ವಿಷ್ಣುವಲ್ಲಭಾಯ ನಮಃ
ಓಂ ಶಿಪಿವಿಷ್ಟಾಯ ನಮಃ
ಓಂ ಅಂಬಿಕಾನಾಥಾಯ ನಮಃ
ಓಂ ಶ್ರೀಕಂಠಾಯ ನಮಃ
ಓಂ ಭಕ್ತವತ್ಸಲಾಯ ನಮಃ
ಓಂ ಭವಾಯ ನಮಃ
ಓಂ ಶರ್ವಾಯ ನಮಃ
ಓಂ ತ್ರಿಲೋಕೇಶಾಯ ನಮಃ 20

ಓಂ ಶಿತಿಕಂಠಾಯ ನಮಃ
ಓಂ ಶಿವಾಪ್ರಿಯಾಯ ನಮಃ
ಓಂ ಉಗ್ರಾಯ ನಮಃ
ಓಂ ಕಪರ್ದಿನೇ ನಮಃ
ಓಂ ಕಾಮಾರಯೇ ನಮಃ
ಓಂ ಅಂಧಕಾಸುರಸೂಧನಾಯ ನಮಃ
ಓಂ ಗಂಗಾಧರಾಯ ನಮಃ
ಓಂ ಲಲಾಟಾಕ್ಷಾಯ ನಮಃ
ಓಂ ಕಾಲಕಾಲಾಯ ನಮಃ
ಓಂ ಕೃಪಾನಿಧಯೇ ನಮಃ 30

ಓಂ ಭೀಮಾಯ ನಮಃ
ಓಂ ಪರಶುಹಸ್ತಾಯ ನಮಃ
ಓಂ ಮೃಗಪಾಣಯೇ ನಮಃ
ಓಂ ಜಟಾಧರಾಯ ನಮಃ
ಓಂ ಕೈಲಾಸವಾಸಿನೇ ನಮಃ
ಓಂ ಕವಚಿನೇ ನಮಃ
ಓಂ ಕಠೋರಾಯ ನಮಃ
ಓಂ ತ್ರಿಪುರಾಂತಕಾಯ ನಮಃ
ಓಂ ವೃಷಾಂಕಾಯ ನಮಃ
ಓಂ ವೃಷಭಾರೂಢಾಯ ನಮಃ40

4ಓಂ ಭಸ್ಮೋದ್ಧೂಳಿತ –
ವಿಗ್ರಹಾಯ ನಮಃ
ಓಂ ಸಾಮಪ್ರಿಯಾಯ ನಮಃ
ಓಂ ಸರ್ವಮಯಾಯ ನಮಃ
ಓಂ ತ್ರಯೀಮೂರ್ತಯೇ ನಮಃ
ಓಂ ಅಜನೀಶ್ವರಾಯ ನಮಃ
ಓಂ ಸರ್ವಜ್ಞಾಯ ನಮಃ
ಓಂ ಪರಮಾತ್ಮನೇ ನಮಃ
ಓಂ ಸೋಮಸೂರ್ಯಾಗ್ನಿ–
ಲೋಚನಾಯ ನಮಃ
ಓಂ ಹವಿಷೇ ನಮಃ
ಓಂ ಯಜ್ಞಮಯಾಯ ನಮಃ 50

ಓಂ ಸೋಮಾಯ ನಮಃ
ಓಂ ಪಂಚವಕ್ತ್ರಾಯ ನಮಃ
ಓಂ ಸದಾಶಿವಾಯ ನಮಃ
ಓಂ ವಿಶ್ವೇಶ್ವರಾಯ ನಮಃ
ಓಂ ವೀರಭದ್ರಾಯ ನಮಃ
ಓಂ ಗಣನಾಥಾಯ ನಮಃ
ಓಂ ಪ್ರಜಾಪತಯೇ ನಮಃ
ಓಂ ಹಿರಣ್ಯರೇತಸೇ ನಮಃ
ಓಂ ದುರ್ಧರ್ಷಾಯ ನಮಃ
ಓಂ ಗಿರೀಶಾಯ ನಮಃ 60

ಓಂ ಗಿರಿಶಾಯ ನಮಃ
ಓಂ ಅನಘಾಯ ನಮಃ
ಓಂ ಭುಜಂಗಭೂಷಣಾಯ
ನಮಃ
ಓಂ ಭರ್ಗಾಯ ನಮಃ
ಓಂ ಗಿರಿಧನ್ವನೇ ನಮಃ
ಓಂ ಗಿರಿಪ್ರಿಯಾಯ ನಮಃ
ಓಂ ಕೃತ್ತಿವಾಸಸೇ ನಮಃ
ಓಂ ಪುರಾರಾತಯೇ ನಮಃ
ಓಂ ಭಗವತೇ ನಮಃ
ಓಂ ಪ್ರಮಥಾಧಿಪಾಯ ನಮಃ 70
ಓಂ ಮೃತ್ಯುಂಜಯಾಯ ನಮಃ

ಓಂ ಸೂಕ್ಷ್ಮತನವೇ ನಮಃ
ಓಂ ಜಗದ್ವ್ಯಾಪಿನೇ ನಮಃ
ಓಂ ಜಗದ್ಗುರವೇ ನಮಃ
ಓಂ ವ್ಯೋಮಕೇಶಾಯ ನಮಃ
ಓಂ ಮಹಾಸೇನಜನಕಾಯ ನಮಃ
ಓಂ ಚಾರುವಿಕ್ರಮಾಯ ನಮಃ
ಓಂ ರುದ್ರಾಯ ನಮಃ
ಓಂ ಭೂತಪತಯೇ ನಮಃ
ಓಂ ಸ್ಥಾಣವೇ ನಮಃ 80
ಓಂ ಅಹಿರ್ಬುಧ್ನ್ಯಾಯ ನಮಃ

ಓಂ ದಿಗಂಬರಾಯ ನಮಃ
ಓಂ ಅಷ್ಟಮೂರ್ತಯೇ ನಮಃ
ಓಂ ಅನೇಕಾತ್ಮನೇ ನಮಃ
ಓಂ ಸಾತ್ತ್ವಿಕಾಯ ನಮಃ
ಓಂ ಶುದ್ಧವಿಗ್ರಹಾಯ ನಮಃ
ಓಂ ಶಾಶ್ವತಾಯ ನಮಃ
ಓಂ ಖಂಡಪರಶವೇ ನಮಃ
ಓಂ ಅಜಾಯ ನಮಃ
ಓಂ ಪಾಪವಿಮೋಚಕಾಯ ನಮಃ 90
ಓಂ ಮೃಡಾಯ ನಮಃ
ಓಂ ಪಶುಪತಯೇ ನಮಃ
ಓಂ ದೇವಾಯ ನಮಃ
ಓಂ ಮಹಾದೇವಾಯ ನಮಃ
ಓಂ ಅವ್ಯಯಾಯ ನಮಃ
ಓಂ ಹರಯೇ ನಮಃ
ಓಂ ಪೂಷದಂತಭಿದೇ ನಮಃ
ಓಂ ಅವ್ಯಗ್ರಾಯ ನಮಃ
ಓಂ ದಕ್ಷಾಧ್ವರಹರಾಯ ನಮಃ
ಓಂ ಹರಾಯ ನಮಃ 100
ಓಂ ಭಗನೇತ್ರಭಿದೇ ನಮಃ
ಓಂ ಅವ್ಯಕ್ತಾಯ ನಮಃ
ಓಂ ಸಹಸ್ರಾಕ್ಷಾಯ ನಮಃ
ಓಂ ಸಹಸ್ರಪದೇ ನಮಃ
ಓಂ ಅಪವರ್ಗಪ್ರದಾಯ ನಮಃ
ಓಂ ಅನಂತಾಯ ನಮಃ
ಓಂ ತಾರಕಾಯ ನಮಃ
ಓಂ ಪರಮೇಶ್ವರಾಯ ನಮಃ 108

ಇತಿ ಶ್ರೀ ಶಿವಾಷ್ಟೋತ್ತರ ಶತನಾಮಾವಳಿಃ ಸಮಾಪ್ತಂ



# ಲಿಂಗಾಷ್ಟಕಂ

ಬ್ರಹ್ಮಮುರಾರಿಸುರಾರ್ಚಿತಲಿಂಗಂ। ನಿರ್ಮಲಭಾಸಿತಶೋಭಿತಲಿಂಗಂ॥
ಜನ್ಮಜದುಃಖವಿನಾಶಕಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 1

ದೇವಮುನಿ ಪ್ರವರಾರ್ಚಿತಲಿಂಗಂ। ಕಾಮದಹನ ಕರುಣಾಕರಲಿಂಗಂ॥
ರಾವಣದರ್ಪವಿನಾಶಕಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 2

ಸರ್ವಸುಗಂಧಸುಲೇಪಿತಲಿಂಗಂ। ಬುದ್ಧಿವಿವರ್ಧನ ಕಾರಣಲಿಂಗಂ॥
ಸಿದ್ಧಸುರಾಸುರ ವಂದಿತಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 3

ಕನಕಮಹಾಮಣಿ ಭೂಷಿತಲಿಂಗಂ। ಫಣಿಪತಿವೇಷ್ಟಿತಶೋಭಿತಲಿಂಗಂ॥
ದಕ್ಷಸುಯಜ್ಞವಿನಾಶನಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 4

ಕುಂಕುಮಚಂದನಲೇಪಿತಲಿಂಗಂ। ಪಂಕಜಹಾರಸುಶೋಭಿತಲಿಂಗಂ॥
ಸಂಚಿತಪಾಪವಿನಾಶನಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 5

ದೇವಗಣಾರ್ಚಿತಸೇವಿತಲಿಂಗಂ। ಭಾವೈರ್ಭಕ್ತಿಭಿರೇವ ಚ ಲಿಂಗಂ॥
ದಿನಕರಕೋಟಿ ಪ್ರಭಾಕರಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 6

ಅಷ್ಟದಳೋಪರಿವೇಷ್ಟಿತಲಿಂಗಂ। ಸರ್ವಸಮುದ್ಭವಕಾರಣಲಿಂಗಂ॥
ಅಷ್ಟದರಿದ್ರವಿನಾಶನಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 7

ಸುರಗುರುಸುರವರಪೂಜಿತಲಿಂಗಂ। ಸುರವನಪುಷ್ಪ ಸದಾರ್ಚಿತಲಿಂಗಂ॥
ಪರಮಪದಂಪರಮಾತ್ಮಕಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ॥ 8

ಲಿಂಗಾಷ್ಟಕಮಿದಂ ಪುಣ್ಯಂ ಯಃ ಪಠೇಚ್ಛಿವಸನ್ನಿಧೌ॥
ಶಿವಲೋಕಮವಾಪ್ನೋತಿ ಶಿವೇನ ಸಹಮೋದತೇ॥ 9

ಲಿಂಗಾಷ್ಟಕಂ ಸಂಪೂರ್ಣಂ

# ಲಿಂಗಾಷ್ಟಕಂ

ಬ್ರಹ್ಮ ಮುರಾರಿಸುರಾರ್ಚಿತಲಿಂಗಂ। ನಿರ್ಮಲಭಾಸಿತಶೋಭಿತಲಿಂಗಂ॥
ಜನ್ಮಜದುಃಖವಿನಾಶಕಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 1

ದೇವಮುನಿ ಪ್ರವರಾರ್ಚಿತಲಿಂಗಂ। ಕಾಮದಹನ ಕರುಣಾಕರಲಿಂಗಂ॥
ರಾವಣದರ್ಪವಿನಾಶಕಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 2

ಸರ್ವಸುಗಂಧಸುಲೇಪಿತಲಿಂಗಂ। ಬುದ್ಧಿವಿವರ್ಧನ ಕಾರಣಲಿಂಗಂ ॥
ಸಿದ್ಧಸುರಾಸುರ ವಂದಿತಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 3

ಕನಕಮಹಾಮಣಿ ಭೂಷಿತಲಿಂಗಂ। ಫಣಿಪತಿವೇಷ್ಟಿತಶೋಭಿತಲಿಂಗಂ ॥
ದಕ್ಷಸುಯಜ್ಞವಿನಾಶನಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 4

ಕುಂಕುಮಚಂದನಲೇಪಿತಲಿಂಗಂ। ಪಂಕಜಹಾರಸುಶೋಭಿತಲಿಂಗಂ ॥
ಸಂಚಿತಪಾಪವಿನಾಶನಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 5

ದೇವಗಣಾರ್ಚಿತಸೇವಿತಲಿಂಗಂ। ಭಾವೈರ್ಭಕ್ತಿಭಿರೇವ ಚ ಲಿಂಗಂ ॥
ದಿನಕರಕೋಟಿ ಪ್ರಭಾಕರಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 6

ಅಷ್ಟದಳೋಪರಿವೇಷ್ಟಿತಲಿಂಗಂ। ಸರ್ವಸಮುದ್ಭವಕಾರಣಲಿಂಗಂ ॥
ಅಷ್ಟದರಿದ್ರವಿನಾಶನಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 7

ಸುರಗುರುಸುರವರಪೂಜಿತಲಿಂಗಂ। ಸುರವನಪುಷ್ಪ ಸದಾರ್ಚಿತಲಿಂಗಂ ॥
ಪರಮಪದಂಪರಮಾತ್ಮಕಲಿಂಗಂ। ತತ್ಪ್ರಣಮಾಮಿ ಸದಾಶಿವಲಿಂಗಂ ॥ 8

ಲಿಂಗಾಷ್ಟಕಮಿದಂ ಪುಣ್ಯಂ ಯಃ ಪಠೇಚ್ಛಿವಸನ್ನಿಧೌ ॥
ಶಿವಲೋಕಮವಾಪ್ನೋತಿ ಶಿವೇನ ಸಹಮೋದತೇ ॥ 9

ಲಿಂಗಾಷ್ಟಕಂ ಸಂಪೂರ್ಣಂ

# ಪಂಚಾಕ್ಷರ ಸ್ತೋತ್ರಂ

(ರಾಗ-- ಶಂಕರಾಭರಣ - ಆದಿತಾಳ)

ಸಾಂಬಸದಾಶಿವ ಸಾಂಬಶಿವಾ। ಲಂಬೋದರ ಗುಹಜನಕ ಶಿವಾ।
ತುಂಬುರು ನಾರದಗೇಯ ಶಿವಾ। ಶಂಬರಾರಿಹರ ಪಾಹಿ ಶಿವಾ ॥ 1

ಶ್ರೀಪತಿ ವಾಕ್ಪತಿ ವಿನುತ ಶಿವಾ। ಗೋಪಧ್ವಜ ಪರಮೇಶಶಿವಾ।
ಪಾಪನಿಚಯ ಹರ ನಾಮಶಿವಾ। ತಾಪಸ ನತಪದ ಕಮಲಶಿವಾ ॥ 2

ಓಂಕಾರ ಸದನ ಗಿರೀಶಶಿವಾ। ಕಿಂಕರಜನ ಹೃತ್ಕುಮುದಶಿವಾ।
ಪಂಕಜ ಕರ ಪರಶುಧರಶಿವಾ। ಸಂಕಲಿತ ವೃಷಭ ಪರುಷಶಿವಾ ॥ 3

ನತನುತ ಜನಪರಿಪಾಲ ಶಿವಾ। ಧೃತವರದಶ ದಿಕ್ಚೇಲ ಶಿವಾ।
ಸಿತಕಲಾಸುಧೃತ ಶೂಲಶಿವಾ। ಹತದುರ್ಮತಿಯುತ ಕಾಲಶಿವಾ ॥ 4

ಮುನಿಮನಮಾನಸ ಶರಣಶಿವಾ। ಘನತರದುರಗಾಭರಣಶಿವಾ।
ವಿನುತ ಜನ ಕುಲೋದ್ಧರಣಶಿವಾ। ಜನನ ಮರಣ ಭವಹರಣಶಿವಾ ॥ 5

ಶಿವಸಾದಾಖ್ಯ ವಿಶೇಷಶಿವಾ। ಭವಹರಶಕ್ತಿ ವಿಭೂಷಶಿವಾ।
ವಿವಿಧ ಸುಗುಣಮಣಿ ಕೋಶಶಿವಾ। ರವಿಮಾರ್ಗಾಮಳ ಕೇಶಶಿವಾ ॥ 6

ವಾಮದೇವ ಸಂಸ್ತುತ್ಯಶಿವಾ। ಭೀಮನಾಮಯುತ ನಿತ್ಯಶಿವಾ।
ಸಾಮಗಾನ ಸಾಂಗತ್ಯಶಿವಾ। ಪ್ರೇಮಾಣಾಂ ದೇಹೇತ್ಯಶಿವಾ ॥ 7

ಯತಿತತಿ ವಿನಮಿತ ಪರಮಶಿವಾ। ಸತತಂ ಸುಮನಸ ವಿನುತಶಿವಾ।
ಮತಿಗತಿದಾಯಕ ಮಹಿಮಶಿವಾ। ಶೃತಿನಾದಾನ್ವಿತ ಗರಿಮಶಿವಾ ॥ 8

ನುತಪಂಚಾಕ್ಷರ ಮಂತ್ರಶಿವಾ। ಮತಿಯುತ ಶಿವಕವಿ ತಂತ್ರಶಿವಾ।
ಕ್ಷಿತಿಮುಖರಹಿತ ಸ್ವತಂತ್ರಶಿವಾ। ಗತಿ ಸರ್ವತ್ರಚ ತ್ವಂಹಿ ಶಿವಾ ॥ 9

ಪಂಚಾಕ್ಷರ ಸ್ತೋತ್ರಂ ಸಂಪೂರ್ಣಂ